ಸಾಹಿತ್ಯ ಮತ್ತು ಜೀವನ (ಭಾಗ ೩)

# ಸಾಹಿತ್ಯ ಮತ್ತು ಯುಗಧರ್ಮ

(ಹದಿನಾಲ್ಕು ಪ್ರಬಂಧಗಳು)

ಅ. ನ. ಕೃಷ್ಣರಾಯ

ಆ ನ ಂ ದ್ ಬ್ರ ದ ರ್ಸ್

ಪಬ್ಲಿಷರ್ಸ್ : : ಬೆಂಗಳೂರು-೨.

೧೯೫೨

# ಮುನ್ನುಡಿ

ಕನ್ನಡದಲ್ಲಿ ನವೋದಯವಾರಂಭವಾಗಿ ಮೂರು ನಾಲ್ಕು ದಶಕಗಳಾದವು. ಈ ಕಾಲಾವಧಿಯಲ್ಲಿ ಕನ್ನಡ ಓದುವವರ ಸಂಖ್ಯೆಯೂ ಬೆಳೆದಿದೆ. ಕನ್ನಡ ಗ್ರಂಥ ಪ್ರಕಾಶಕರ ಸಂಖ್ಯೆಯೂ ಬೆಳೆಯುತ್ತ ಬಂದಿದೆ. ಆದರೆ ವಿಚಾರ ಸಾಹಿತ್ಯದ ದಾರಿದ್ರ್ಯ ನೀಗಿಲ್ಲ. ಕನ್ನಡ ಓದುಗರು ಕಥೆ ಕಾದಂಬರಿಗಳನ್ನು ಸ್ವಾಗತಿಸುವಷ್ಟು ಆದರದಿಂದ ವಿಚಾರಸಾಹಿತ್ಯವನ್ನು ಸ್ವಾಗತಿಸುತ್ತಿಲ್ಲ. ಈ ಕಾರಣಕ್ಕಾಗಿಯೇ ಕನ್ನಡ ಪ್ರಕಾಶಕರಾದರೂ ವಿಚಾರಸಾಹಿತ್ಯ ಪ್ರಕಟಿಸಲು ಹಿಂಜರಿಯುತ್ತಾರೆ. ಈ ಕೊರತೆ ಕನ್ನಡದಲ್ಲಿ ನೀಗಿಸಲು ಪ್ರಯತ್ನಿಸುತ್ತಿರುವ ಮೆಸರ್ಸ್ ಆನಂದ್ ಬ್ರದರ್ಸ್, ಪ್ರಕಾಶಕರು ಅಭಿನಂದನೀಯರು.

'ಸಾಹಿತ್ಯ ಮತ್ತು ಯುಗಧರ್ಮ' ಪ್ರಬಂಧ ಸಂಗ್ರಹದಲ್ಲಿ ನಾನು ಆಗಾಗ್ಗೆ ಬರೆದ ಕೆಲವು ಪ್ರಬಂಧಗಳೂ, ಈ ಗ್ರಂಥಕ್ಕಾಗಿಯೇ ಬರೆದ 'ಅಲ್ಲಮಪ್ರಭು' – 'ಉಮರ್ ಖಯ್ಯಾಂ' ಮತ್ತು ಕೆಲವು ಪ್ರಬಂಧಗಳೂ ಸೇರಿವೆ.

ಈ ಪ್ರಬಂಧಗಳಲ್ಲಿ 'ಬಸವಣ್ಣನವರನ್ನು ನೋಡುವ ದೃಷ್ಟಿ' – 'ವೀರಶೈವ ಸಾಹಿತ್ಯದ ನಿಜಸ್ವರೂಪ' – 'ಜನಪದಕವಿ ಸರ್ವಜ್ಞ' ಮೂರು ಪ್ರಬಂಧಗಳು ವಿಶೇಷ ಚರ್ಚೆಗೊಳಗಾದವು. ಗದಗಿನ 'ಸಾವಧಾನ' ಪತ್ರಿಕೆ 'ಬಸವಣ್ಣನವರನ್ನು ನೋಡುವ ದೃಷ್ಟಿ'ಯ ಮೇಲೆ ಇಲ್ಲಸಲ್ಲದ ಆರೋಪಗಳನ್ನು ಮಾಡಿ ಜಾತೀಯತೆಯನ್ನು ಮುಂದೊಡ್ಡಿತು. 'ಜನಪದಕವಿ ಸರ್ವಜ್ಞ' ಪ್ರಬಂಧದ ಮೇಲೆ ರಾಯಚೂರಿನಿಂದ ಹೊರಡುವ 'ಅಮರವಾಣಿ' ಪತ್ರಿಕೆಯಲ್ಲಿ ಗಾಂಭೀರ್ಯ ಮೀರಿದ ವಿಮರ್ಶೆ ಪ್ರಕಟವಾಯಿತು. ಸರ್ವಜ್ಞಕವಿಯನ್ನು ನಾನು 'ಅವಧೂತ'ನೆಂದು ಕರೆದುದಕ್ಕೆ ಅಮರವಾಣಿಯ ಬರೆಹಗಾರರೂ, ಮತ್ತು ಪಂಡಿತರತ್ನಂ ಬಿ. ಶಿವಮೂರ್ತಿಶಾಸ್ತ್ರಿಗಳೂ ಆಕ್ಷೇಪವೆತ್ತಿದ್ದಾರೆ.

ಇಂದು ವೀರಶೈವ ಸಾಹಿತ್ಯದ ಬಗ್ಗೆ ಸಾಕಷ್ಟು ಗ್ರಂಥಗಳು ಹುಟ್ಟಿಕೊಂಡಿವೆ. ಇವುಗಳಲ್ಲಿ ಬಹುಭಾಗ ಸಂಪ್ರದಾಯಾತ್ಮಕ, ಕೆಲವು ಸಂಶೋಧನಾತ್ಮಕ. ವಿಮರ್ಶಾತ್ಮಕ ಕೃತಿಗಳು ತೀರ ವಿರಳ. ವೀರಶೈವೇತರರು ವೀರಶೈವ ಸಾಹಿತ್ಯ ಸಂಶೋಧನೆಯಲ್ಲಿ ದೊಡ್ಡ ಪ್ರಮಾಣದಲ್ಲಿ ಕೆಲಸ ಮಾಡಿರುವರೆಂದರೆ ಅತಿಶಯೋಕ್ತಿಯಲ್ಲ. ವೀರಶೈವರೂ, ವೀರಶೈವೇತರರೂ ಈ ಸಾಹಿತ್ಯದ ಬಗ್ಗೆ ವಿಮರ್ಶಾತ್ಮಕವಾಗಿ ಕೆಲಸಮಾಡುವ ಕಾಲ ಸನ್ನಿಹಿತವಾಗಿದೆಯೆಂದು ಎಂದು ಸೂಚಿಸಲು ಬಯಸುತ್ತೇನೆ.

ವೀರಶೈವ ಸಾಹಿತ್ಯ, ಧರ್ಮಗಳ ಬಗ್ಗೆ ನಾನು ತೋರಿರುವ ಪ್ರೇಮ, ಗೌರವ, ಶ್ರದ್ಧೆ ಯಾವ ವೀರಶೈವನ ಅಭಿಮಾನಕ್ಕಿಂತಲೂ ಕಡಿಮೆಯಾದುದಲ್ಲವೆಂದು ಧೈರ್ಯವಾಗಿ ಹೇಳಬಲ್ಲೆ. ವೀರಶೈವ ಸಾಹಿತ್ಯಕ್ಕೆ ಸಂಬಂಧಪಟ್ಟ ಲೇಖನಗಳಲ್ಲಾಗಲಿ ಇತರ ನನ್ನ ಬರವಣಿಗೆಗಳಲ್ಲಾಗಲಿ ಜಾತೀಯತೆಯ ಸೊಂಕು ತಗಲಲಿಲ್ಲವೆಂದು ನಾನು ತ್ರಿಕರಣಪೂರ್ವಕವಾಗಿ ಹೇಳಬಲ್ಲೆ. ಧರ್ಮಗಳ ನೆಲೆಯನ್ನು, ಸತ್ಯದ ಋಜುಸ್ವರೂಪವನ್ನರಸುವವನಿಗೆ 'ಇದು ನನ್ನದು – ಇದು ನನ್ನದಲ್ಲ' ಎಂಬ ದುರಭಿಮಾನವಿರುವುದು ಸಾಧ್ಯವಿಲ್ಲ.

ನಾನು ಧರ್ಮ, ಮತಗಳನ್ನು ಅಳೆದು ನೋಡುವ ಮಾನದಂಡ ಮತಪ್ರಕ್ರಿಯೆ ಹಾಗೂ ಮತಾಚಾರವಲ್ಲ. ಮಾನವನ ಉತ್ಕ್ರಾಂತಿಯಲ್ಲಿ ಅವುಗಳ ಸ್ಥಾನಗೌಣ. ತ್ರಿಕಾಲಾಬಾಧಿತವಾದ ಸತ್ಯವನ್ನು ಒಂದು ಮತ ಎಷ್ಟರಮಟ್ಟಿಗೆ ಹೇಳುತ್ತದೆ – ಆ ಸತ್ಯವನ್ನು ಎಷ್ಟರಮಟ್ಟಿಗೆ ಪರಿಪಾಲಿಸುತ್ತದೆ – ಆ ತಿಳಿವಿನಿಂದ ಮಾನವತೆಯ ಕಲ್ಯಾಣ ಎಷ್ಟರಮಟ್ಟಿಗೆ ಸಾಧಿಸುತ್ತದೆ ಎಂದು ನೋಡುವವನು ನಾನು. ಈ ದೃಷ್ಟಿ ಬೆಳೆಯದಿದ್ದರೆ ಸತ್ಯದ ಬೆಳಕು ಮತಪ್ರಕ್ರಿಯೆಯ ಕಾರ್ಮೋಡಗಳಲ್ಲಿ ಅಡಕವಾಗುತ್ತದೆ. ಆತ್ಮರತರ ದಿವ್ಯವಾಣಿ, ಸಂಪ್ರದಾಯವಾದಿಗಳ ಕೈಗೆ ಸಿಕ್ಕಿ ತೇಜೋಹೀನವಾಗುತ್ತದೆ.

ಮಾನವಕಲ್ಯಾಣದ ದೃಷ್ಟಿಯಿಂದ ಬಸವಣ್ಣ, ಅಲ್ಲಮಪ್ರಭು, ಸರ್ವಜ್ಞ ಮೊದಲಾದ ಮಹಾಪುರುಷರನ್ನು ಮತಪ್ರಕ್ರಿಯೆಯ ಉಕ್ಕಿನ ಹಿಡಿತದಿಂದ ಬಿಡಿಸಬೇಕಾದುದಗತ್ಯ. ಅವರ ಜೀವನ, ಸಂದೇಶದಿಂದ ಲೋಕಕ್ಕೇ ಬೆಳಕು ದೊರೆಯುವಾಗ ಕೇವಲ ವೀರಶೈವ ಪ್ರಪಂಚಕ್ಕೆ ಅವರನ್ನು

ಅಡಕಮಾಡುವುದು ತಪ್ಪು. ನಾನು ಸರ್ವಜ್ಞನನ್ನು 'ಅವಧೂತ' ಎಂದು ಕರೆದಾಗ ವೀರಶೈವರು ಅವನಿಗೆ ಕೊಡುತ್ತಿರುವ ಸ್ಥಾನಕ್ಕಿಂತಲೂ ದೊಡ್ಡ ಸ್ಥಾನವನ್ನು ಕೊಡುತ್ತಿರುವುದು ನನ್ನ ವಿಮರ್ಶಕರ ಗಮನಕ್ಕೆ ಬರಲಿಲ್ಲ. ಅವಧೂತನೆಂದು ನಾನು ಸರ್ವಜ್ಞನನ್ನು ಕರೆದು ಅವನನ್ನು ಶೈವಾಚಾರದ ಹೊರಗಿಟ್ಟಿರುವೆನೆಂದು 'ಅಮರವಾಣಿ'ಯ ಲೇಖಕರು ಆರೋಪಿಸಿದ್ದಾರೆ. ಅವರಿಗೆ 'ಅವಧೂತ' ಶಬ್ದದ ಅರ್ಥ ತಿಳಿದಿಲ್ಲವೆನ್ನುವುದು ಸ್ವತಃಸ್ಸಿದ್ಧ. ಅವಧೂತತ್ವ ಮನಸ್ಸಿನ ಒಂದು ಮಟ್ಟ – ಉತ್ಕ್ರಾಂತಿಯ ಮಹೋನ್ನತ ಸ್ಥಿತಿ. ಅವಧೂತನಾಗುವನು ಹಿಂದುವಾಗಿರಬಹುದು, ಮುಸ್ಲಿಮನಾಗಿರಬಹುದು, ಕ್ರೈಸ್ತನಾಗಿರಬಹುದು. ಶಿಶುನಾಳ ಶರೀಫಸಾಹೇಬ, ನವಿಲುಗುಂದದ ನಾಗಲಿಂಗಸ್ವಾಮಿ, ಸಿದ್ಧಾರೂಢ, ಚಿದಾನಂದ, ಮನ್‌ಸೂರ್, ಥಾಮಸ್ ಅಕೆಂಪಿಸ್, ಜಾನ್ ಬನಿಯನ್, ಉಮರ್ ಖಯ್ಯಾಂ, ಸಾಧು ಸುಂದರ್‌ಸಿಂಗ್ ಇವರೆಲ್ಲಾ ಅವಧೂತರೇ. ಇವರ ವರ್ಗಕ್ಕೆ ನಾನು ಸರ್ವಜ್ಞನನ್ನು ಸೇರಿಸಿದುದಕ್ಕೆ ವೀರಶೈವರು ವ್ಯಸನಪಡಬೇಕೇ? ಲಾಂಛನ, ಆಚಾರ, ವಿಧಿ, ಕರ್ಮ ಎಲ್ಲವೂ ಸಾಧಕನಿಗೆ ಬೇಕು. ಎಲ್ಲಿಯವರೆಗೆ? ಮಗು ನಡೆಯುವುದನ್ನು ಕಲಿಯುವವರೆಗೆ ಅದರ ಕೈಗೊಂದು ಮೂರು ಕಾಲಿನ ಬೈಸಿಕಲ್ ಮಾಡಿಕೊಡುತ್ತೇವೆ. ಮಗು ನಡೆಯುವುದನ್ನು ಕಲಿತ ಮೇಲೆ ಆ ಬೈಸಿಕಲ್ ಬಿಟ್ಟುಬಿಡುತ್ತದೆ. ಸರ್ವಜ್ಞ, ಅಲ್ಲಮಪ್ರಭು ಈ ಬೈಸಿಕಲ್ ಬಿಟ್ಟು ಮುಂದೆ ಹೋಗಿದ್ದಾರೆ. ಅವರಿನ್ನೂ ಬೈಸಿಕಲ್ ಹಿಡಿದುಕೊಂಡೇ ತೊಳಲಾಡುತ್ತಿದ್ದಾರೆಂನು 'ಅಮರವಾಣಿ'ಯ ಪಂಡಿತರು ಭಾವಿಸುತ್ತಾರೆ.

ಪಂಡಿತರು ಬರೆಯುವ ವಿಮರ್ಶೆಗಳ ಮಟ್ಟ ಇನ್ನಾದರೂ ಸುಧಾರಿಸಬೇಕು. ಭಿನ್ನಾಭಿಪ್ರಾಯ ಹುಟ್ಟಿದ ಕೂಡಲೆ ಎದುರಾಳಿಯನ್ನು ತುಚ್ಛ ಶಬ್ದಗಳಿಂದ ದೂಷಿಸುವ ಪ್ರವೃತ್ತಿ (ಸಾವಧಾನ ಪತ್ರಿಕೆಯಲ್ಲಿ ಬಂದ ವಿಮರ್ಶೆ ನೋಡಿ) ಅಸಹನೆ, ಅಸಂಸ್ಕೃತಿಯ ಲಕ್ಷಣ. ಇಂಥ ವೀರಶೈವ ಪಂಡಿತರಿಗೆ 'ವೀರಶೈವ' ಶಬ್ದಾರ್ಥವೇ ತಿಳಿದಿಲ್ಲವೆಂದು ನಾನು ಧಾರಾಳವಾಗಿ ಹೇಳಬಲ್ಲೆ. ವಾದದಿಂದ, ಮಥನದಿಂದ ಸತ್ಯಲಕ್ಷ್ಮಿ ಹುಟ್ಟಬೇಕು; ಜಾತ್ಯಂಧತೆಯ ಗರಳ ಹುಟ್ಟಬಾರದು.

'ಅವಧೂತ' ಲಕ್ಷಣವನ್ನು ಕುರಿತು ಪಾಂಡಿತ್ಯ ಹಾಗೂ ಅನುಭವ ಪೂರ್ಣವಾದ ಲೇಖನ ಬರೆದುಕೊಟ್ಟು ಉಪಕಾರ ಮಾಡಿರುವ ಗೆಳೆಯ ಶ್ರೀ ದೇವುಡು ಅವರಿಗೆ ನಾನು ಚಿರಋಣಿ. ಈ ಸಂಗ್ರಹದಲ್ಲಿ ಬಂದಿರುವ ಕೆಲವು ಲೇಖನಗಳನ್ನು ಈ ಮೊದಲೇ ಪ್ರಕಟಿಸಿದ ಪತ್ರಿಕಾ ಸಂಪಾದಕರಿಗೂ, ವಿಸರಣಕ್ಕೆ ಅನುಕೂಲ ಮಾಡಿಕೊಟ್ಟ ಮದರಾಸು, ಮೈಸೂರು, ಧಾರವಾಡದ ಎ. ಐ. ಆರ್. ಸ್ಟೇಷನ್ನಿನ ಅಧಿಕಾರಿಗಳಿಗೂ ನನ್ನ ಕೃತಜ್ಞತೆ ಸಲ್ಲುತ್ತದೆ.

"ಅನ್ನಪೂರ್ಣ"
ವಿಶ್ವೇಶ್ವರಪುರಂ, ಬೆಂಗಳೂರು-೪
೨೪-೪-೧೯೫೨.

ಅ. ನ. ಕೃಷ್ಣರಾಯ

# ಪರಿವಿಡಿ



## ಅನುಬಂಧ





ಕನ್ನಡ ನಾಡು, ನುಡಿಯ ಭಕ್ತರಾಗಿ

ನಾಲ್ಕುದಶಕಕಾಲ ಅವುಗಳ ಉತ್ಕರ್ಷಕ್ಕೆ

ಸತತವಾಗಿ ಶ್ರಮಿಸಿದ

**ಪ್ರೊ. ಶಿವಲಿಂಗ, ಶಿವಯೋಗಪ್ಪ ಬಸವನಾಳರವರ**

ದಿವ್ಯಸ್ಮೃತಿಗೆ ಅರ್ಪಿಸಲಾಗಿದೆ.

# ಸಾಹಿತ್ಯ ಮತ್ತು ಯುಗಧರ್ಮ

## ೧. ಲಿಂಗೈಕ್ಯ ಪ್ರೊ. ಬಸವನಾಳರು

ಅರವತ್ತರ ಹೊಸಲು ಬಳಿಗೆ ಹೋಗುತ್ತಿದ್ದ ಪ್ರೊ. ಬಸವನಾಳರು ಡಿಸೆಂಬರ್ ತಿಂಗಳು ೨೩ ನೆಯ ತಾರೀಖು, ಭಾನುವಾರ ಹೃದಯ ವಿಕಾರದಿಂದ ಲಿಂಗೈಕ್ಯರಾದರು. ಬಸವನಾಳರನ್ನು ಬಲ್ಲವರಿಗೆ ಅವರ ಸ್ನೇಹದ ಸವಿಯನ್ನುಂಡವರಿಗೆ, ಅವರ ನಿಷ್ಕಾಮಸೇವೆಯ ಹದನನ್ನರಿತವರಿಗೆ ಈ ಸುದ್ದಿ ವಜ್ರಾಘಾತದಷ್ಟು ಘೋರ – ದುರ್ಧರ. ಶ್ರೀ ಪಂ. ವೆಂಕೋಬಾಚಾರ್ಯರು ತಮ್ಮ 'ಅಶ್ರುತರ್ಪಣ'ದಲ್ಲಿ ಹೇಳಿರುವಂತೆ:

"ದುಂಡುಮುಖ ಗಿಡ್ಡ ಮೈ, ನಸುಗೆಂಪು ಮೆಲುದನಿಯು
ಗೆಲುವಿಂದೆ ಗೆಳೆಯರನು ಕಾಣ್ಬಬಗೆ ಬಲ ಸೊಂಪು.
ಭಾವಪೂರ್ಣವು ನಿಮ್ಮ ನುಡಿ. ಮಾತು ಅದು ಇಂಪು.
ನಿಮ್ಮ ರಸಜೀವನದಿ ನಯನುಡಿಗಳತಿ ಪೆಂಪು.
ಕನ್ನಡಕಪಾರವೈ ನಿಮ್ಮ ಸತತ ಘನಸೇವೆ.
ಸಂಸ್ಥೆಗಳ ನಡೆಸುತಲಿ ಕೀರ್ತಿಯನು ಗಳಿಸಿದಿರಿ.
ದೇಹವದು ಹಣ್ಣಾಗೆ ದುಡಿಮೆಯಲ್ಲಿ ಸವೆಯಿಸಿದಿರಿ.
'ಜಯ ಕರ್ನಾಟಕ' ವನದುವೆ ಹುಮ್ಮಸದಿ ಪ್ರಕಟಿಸುತೆ
ನಾಡನುಡಿಗಳ ಸೇವೆ ಗೈಯುತಲೆ ಬಾಳಿದಿರಿ.
ಏಸು ಜನರಿಗೆ ನಿತ್ಯವಿದ್ಯೆಯನು ಕಲಿಸಿದಿರಿ.
ಏಸು ಜನರಿಗೆ ನೀವು ಜೀವನ್ನದ ದಾರಿದೀಪ.
ಕನ್ನಡನಾಡ ಕನಸಿಂದು ನನಸಾಗುತಿರೆ

ಬಸವನಾಳರೆ, ನೀವು ತೊರೆದೆಮ್ಮ ಪೋಗಿಹಿರಿ.
ಆತ್ಮಕಿದೆ ಶಾಂತಿಯನು ಕರುಣಿಸಲಿ ಮಾತಾಯಿ."

ಧಾರವಾಡದ ರೈಲ್ವೆ ಸ್ಟೇಷನ್ ಬಿಟ್ಟು ಎರಡು ಮೂರು ಫರ್ಲಾಂಗು ಹೋಗುವಲ್ಲಿ ಸಿಕ್ಕುವ ಉಳವಿ ಬಸಪ್ಪನ ಗುಡ್ಡದಲ್ಲಿ 'ಮಾಸ್ತರರ' ಮನೆ. ಧಾರವಾಡದಲ್ಲಿ ವಾಸಕ್ಕೆ ಯೋಗ್ಯವಾಗಿರುವ ಕೆಲವು ಮನೆಗಳಲ್ಲಿ ಮಾಸ್ತರದೂ ಒಂದು. ಅದರ ನಕ್ಷೆ ಸಿದ್ಧಗೊಳಿಸಿ, ಮೇಲ್ವಿಚಾರಣೆ ನೋಡಿಕೊಂಡು ಕಟ್ಟಿಸಿದವರು ಮಾಸ್ತರರೇ. ಮನೆಯಲ್ಲಿ ಸಾಕಷ್ಟು ವಿಶಾಲವಾದ ಹಜಾರ. ಹಜಾರದ ಒಂದು ಕಡೆ ಮಾಸ್ತರರ ತಮ್ಮಂದಿರು ವಕೀಲರ ಪ್ರಪಂಚ; ಇನ್ನೊಂದು ಕಡೆ ಮಾಸ್ತರರ ಪ್ರಪಂಚ. ಪಂಡಿತರು, ಕಲಾವಿದರು, ವಕೀಲರು, ಡಾಕ್ಟರುಗಳು, ಫಾರೆಸ್ಟ್ ಕಂಟ್ರ್ಯಾಕ್ಟರುಗಳು, ಊರು ಊರುಗಳ ಮುನಿಸಿಪಾಲಿಟಿ, ಡಿಸ್ಟ್ರಿಕ್ ಬೋರ್ಡ್ ಅಧ್ಯಕ್ಷರುಗಳು, ಸಾರ್ವಜನಿಕ ಸಂಸ್ಥೆಗಳ ಅಧ್ಯಕ್ಷರು, ಕಾರ್ಯದರ್ಶಿಗಳು ಹೀಗೆ ನಾನಾ ವೃತ್ತಿ ಪ್ರವೃತ್ತಿಗಳ ಜನ ಸತತ ಸೇರಿರಬೇಕು. ಎಲ್ಲರಿಗೂ ಮಾಸ್ತರರ ಸಲಹೆ ಸಿದ್ಧ; ಎಲ್ಲರ ಕಷ್ಟ ಸುಖ ಮಾಸ್ತರರ ಕಷ್ಟ ಸುಖ. ಈ ಅನುಭವಗೋಷ್ಠಿಯಲ್ಲಿ ಹೆಚ್ಚಾಗಿ ಸೇರುತ್ತಿದ್ದವರು ಬುದ್ಧಯ್ಯ ಸ್ವಾಮಿ ಪುರಾಣಿಕರು, ರೆವರೆಂಡ ಚೆನ್ನಪ್ಪ ಉತ್ತಂಗಿಯವರು, ಹಾಳಭಾವಿಯವರು ಮೊದಲಾದ ವಿದ್ವಾಂಸರು. ಸಾಹಿತ್ಯವನ್ನು ಕುರಿತು ಮಾತು ಹೊರಟರಂತೂ ಮಾಸ್ತರರ ಪ್ರತಿಭೆ ಬೆಳದಿಂಗಳಂತೆ ಪಸರಿಸುತ್ತಿತ್ತು.

೧೯೧೬ ರಲ್ಲಿ ಮಾಸ್ತರರು ಎಂ. ಎ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಬೆಳಗಾಂವಿಯ ಗಿಲಗಂಜಿ ಆರಟಾಳ ಹೈಸ್ಕೂಲಿನಲ್ಲಿ ಅಧ್ಯಾಪಕ ವೃತ್ತಿಯನ್ನು ಕೈಗೊಂಡರು. ಅವರ ಜತೆಯಲ್ಲಿದ್ದವರು ಸರ್ಕಾರಿ ಕೆಲಸಕ್ಕೆ ಸೇರಿ ದೊಡ್ಡ ಪದವಿಗಳಿಗೇರಿದರು. ವೀರಶೈವ ಸಮಾಜದಲ್ಲಿ ಮೊಟ್ಟ ಮೊದಲಿಗೆ ಎಂ. ಎ. ಪಾಸು ಮಾಡಿದ ಮಾಸ್ತರರಿಗೆ ಕೈತುಂಬ ಸಂಬಳ ಬರುವ ಒಳ್ಳೆಯ ಕೆಲಸ ಸಿಕ್ಕುವುದು ಕಷ್ಟವಾಗಿರಲಿಲ್ಲ. ಎಂ. ಎ. ಪರೀಕ್ಷೆಯಲ್ಲಿ ಉತ್ತಮ ವರ್ಗದಲ್ಲಿ ತೇರ್ಗಡೆಯಾದುದಕ್ಕೆ ಸಿಕ್ಕಿದ ನಗದು ಹಣದ ಪಾರಿತೋಷಿಕವನ್ನು ನಿರಾಕರಿಸಿ, ಆ ಮೌಲ್ಯವನ್ನು ಪುಸ್ತಕ ರೂಪವಾಗಿ ಪಡೆಯಲು ಬಸವನಾಳರು

ಬಯಸಿದರು. ಈ ವಿದ್ಯಾದಾಹವೇ ಅವರನ್ನು ಸರ್ಕಾರಿ ಉದ್ಯೋಗದಿಂದೆಳೆದು ಮಾಸ್ತರಿಕೆಗೆ ದೂಡಿದುದು. ಆರಟಾಳ ಹೈಸ್ಕೂಲಿನ ಅಸ್ತಿತ್ವ ಭದ್ರವಾದ ಮೇಲೆ ಬಸವನಾಳರು ಧಾರವಾಡಕ್ಕೆ ಬಂದು ರಾಜಾ ಲಖಮನಗೌಡ ಸರ್ ದೇಸಾಯಿ ಹೈಸ್ಕೂಲಿನ ಸ್ಥಾಪನೆ, ವ್ಯವಸ್ಥೆಗಳಲ್ಲಿ ಮುಖ್ಯ ಪಾತ್ರ ವಹಿಸಿದರು.

ಕನ್ನಡದ ಗಡಿನಾಡಾದ ಬೆಳಗಾಂವಿಯಲ್ಲಿ ಕನ್ನಡ ದೀಪದ ತೈಲ ತೀರುತ್ತಾ ಬಂದಿತ್ತು. ಅದಕ್ಕೆ ತೈಲವೆರೆದು ಬೆಳಗಾಂವಿಯಲ್ಲಿ ಕನ್ನಡತನವನ್ನು ಉಳಿಸುವ ಮಹಾಪ್ರಯತ್ನವನ್ನು ವೀರಶೈವ ಶಿಕ್ಷಣ ಸಂಸ್ಥೆಯವರು ಕೈಗೊಂಡು 'ಲಿಂಗರಾಜಾ ಕಾಲೇಜ್' ಸ್ಥಾಪಿಸಿದರು, ಡಾ|| ನಂದೀಮಠದವರು ಪ್ರಿನ್ಸಿಪಾಲರಾದರು; ಬಸವನಾಳರು ವೈಸ್ ಪ್ರಿನ್ಸಿಪಾಲರಾದರು. ಇವರಿಬ್ಬರ ಸಾಧನ, ಶ್ರದ್ಧೆ, ತ್ಯಾಗದ ಪ್ರತೀಕವಾಗಿ ಇಂದು ಲಿಂಗರಾಜಾ ಕಾಲೇಜ್‌ನಿಂತಿದೆ. ಕಾಲೇಜ್ ಕಟ್ಟಡದ ನಿರ್ಮಾಣದಿಂದ, ಪಾಠ ಪ್ರವಚನಗಳ ವ್ಯವಸ್ಥೆ, ಲೈಬ್ರರಿ ಲ್ಯಾಬರೇಟರಿಗಳ ಸ್ಥಾಪನೆ – ಪ್ರತಿಯೊಂದು ವಿಷಯದಲ್ಲಿಯೂ ನಂದೀಮಠರೂ, ಬಸವನಾಳರೂ ಮಾಡಿರುವ ದುಡಿಮೆ ಅವರ್ಣನೀಯ.

ಗಿಲಗಂಜಿ ಆರಟಾಳ ಹೈಸ್ಕೂಲಿನಲ್ಲಿ ಬಸವನಾಳರು ಅಧ್ಯಾಪಕರಾಗಿದ್ದಾಗಲೇ ಅವರನ್ನು ಮುಖ್ಯೋಪಾಧ್ಯಾಯರನ್ನಾಗಿಮಾಡುವ ಪ್ರಯತ್ನ ನಡೆಯಿತು. ಬಸವನಾಳರು ಒಲ್ಲೆವೆಂದು ಪ್ರೊ. ಸಾಖರೆಯವರಿಗೆ ಆ ಸ್ಥಾನ ಬಿಟ್ಟುಕೊಟ್ಟರು. ಲಿಂಗರಾಜಾ ಕಾಲೇಜಿಗೆ ಬಸವನಾಳರನ್ನು ಪ್ರಿನ್ಸಿಪಾಲರನ್ನಾಗಿ ಮಾಡಬೇಕೆಂದು ಪ್ರಯತ್ನನಡೆಯಿತು. ಬಸವನಾಳರು ತಮ್ಮ ಶಿಷ್ಯರಾದ ಡಾ. ನಂದೀಮಠರಿಗೆ ಪಟ್ಟಗಟ್ಟಿ ತಾವು ವೈಸ್ ಪ್ರಿನ್ಸಿಪಾಲರಾದರು. ಸ್ಥಾನಮಾನಕ್ಕೆ ಹಾತೊರೆಯುವುದು, ಹೋರಾಡುವುದೂ ಬಸವನಾಳರ ಜಾಯಮಾನಕ್ಕೇ ಬರಲಿಲ್ಲ. ಬಸವನಾಳರು ದೊಡ್ಡ ಕಾಲೇಜೊಂದರ ಪ್ರೊಫೆಸರಾಗಿದ್ದು ನಿವೃತ್ತರಾದರೂ ಅವರು ಜನರಿಗೆ 'ಮಾಸ್ತರೇ' ಆಗಿದ್ದರು. ಆ ಹೆಸರೇ ಅವರಿಗೆ ಅತ್ಯಂತ ಪ್ರೀತ್ಯಾಸ್ಪದವಾಗಿತ್ತು. ಉತ್ತರ ಕರ್ನಾಟಕದ ಶಿಕ್ಷಣಕ್ಷೇತ್ರದಲ್ಲಿ ಕನ್ನಡವನ್ನು ಉಳಿಸಿ, ಅದಕ್ಕೆ ಗೌರವಯುತ ಸ್ಥಾನವನ್ನು ಸೃಷ್ಟಿಮಾಡಿಕೊಟ್ಟ ದಿವಾನ್‌ಬಹದ್ದೂರ್ ರೊದ್ದ ಶ್ರೀನಿವಾಸರಾಯರು,

ಡೆಪ್ಯುಟಿ ಚನ್ನಬಸಪ್ಪನವರು, ಸರ್ ಸಿದ್ದಪ್ಪ ಕಂಬಳಿಯವರನ್ನು ಸ್ಮರಿಸುವಾಗ ನಾವು ಮರೆಯದೆ ಬಸವನಾಳರನ್ನು ಸ್ಮರಿಸಬೇಕು. ಇವರುಗಳ ವೀರಸೇವೆ, ಘನ ತ್ಯಾಗವಿಲ್ಲದಿದ್ದಿದ್ದರೆ ಇಂದು ಉತ್ತರ ಕರ್ನಾಟಕ ಮರಾಟಿಮಯವಾಗಿ ಬಿಡುತ್ತಿತ್ತು.

ಕಾಲೇಜಿನಲ್ಲಿದ್ದಾಗಲೇ ಬಸವನಾಳರು ನಮ್ಮ ಐಚ್ಛಿಕ ವಿಷಯವಾದ 'ಭಾರತ ಇತಿಹಾಸ'ದ ಮೇಲೆ ಗ್ರಂಥಗಳನ್ನು ಬರೆದಿದ್ದರು. ಹತ್ತು ವರ್ಷ (೧೯೩೩-೪೪) ಕಾಲೇಜ್ ಸೇವೆ ಮಾಡಿ ನಿವೃತ್ತರಾಗಿ ಧಾರವಾಡಕ್ಕೆ ಬಂದ ಮೇಲೆ ಇವರ ಸಾಹಿತ್ಯ ಸೇವೆ ಹೊಸ ಹುರುಪಿನಿಂದ ಆರಂಭವಾಯಿತು. ನಾಗವರ್ಮನ 'ಕಾವ್ಯವಲೋಕನ', 'ಕೇಶಿರಾಜನ ಶಬ್ದಮಣಿದರ್ಪಣ' ಬಸವ ನಾಳರ ಪಂಡಿತ್ಯದ ಮೂಸೆಯಲ್ಲಿಬಿದ್ದು, ಅಪರಂಜಿಗಳಾಗಿ ಹೊರಬಿದ್ದವು. ವೀರಶೈವ ಶಿಕ್ಷಣ ಸಂಸ್ಥೆಯಲ್ಲಿ 'ಸಾಹಿತ್ಯ ವಿಭಾಗ'ವನ್ನಾರಂಭಿಸಿ, ಅದರ ಆಶ್ರಯದಲ್ಲಿ 'ಜರ್ನಲ್ ಆಫ್ ದಿ ಲಿಂಗಾಯತ್ ಎಜುಕೇಷನ್ ಸೊಸೈಟಿ' ಎನ್ನುವ ಪಾಂಡಿತ್ಯಪೂರ್ಣ ಆಂಗ್ಲ – ಕನ್ನಡ ತ್ರೈಮಾಸಿಕ ಪತ್ರಿಕೆಯನ್ನಾರಂಭಿ ಸಿದರು. ಸಾಹಿತ್ಯ ಭಾಗದ ಆಶ್ರಯದಲ್ಲಿಯೇ ಬಸವನಾಳರಿಂದ ಪರಿಷ್ಕರಿ ಸಲ್ಪಟ್ಟ ವಿರೂಪಾಕ್ಷ ಪಂಡಿತನ ಚನ್ನಬಸವ ಪುರಾಣ, ಚಾಮರಸನ ಪ್ರಭುಲಿಂಗ ಲೀಲೆ, ಷಡಕ್ಷರಿಯ ಶಬರ ಶಂಕರ ವಿಳಾಸ ಮೊದಲಾದ ಕಾವ್ಯಗಳು ಪ್ರಕಟವಾದವು. 'ವೀರಶೈವ ತತ್ತ್ವ ಪ್ರಕಾಶ' ಗ್ರಂಥ ಬಸವ ನಾಳರ ಅಪಾರ ದುಡಿಮೆಯ ಫಲವಾಗಿ ಹೊರಬಿತ್ತು. ವೀರಶೈವ ಸಾಹಿತ್ಯ, ಧರ್ಮದ ಬಗ್ಗೆ ಸತತವಾಗಿ ಶ್ರಮಿಸಿದ್ದ ಇಪ್ಪತ್ತುನಾಲ್ಕು ಮಂದಿ ವಿದ್ವಾಂಸರ ನೆರವನ್ನು ಬಸವನಾಳರು ಧಾರಾಳವಾಗಿ ಪಡೆದು ಅಧಿಕೃತ ಗ್ರಂಥವನ್ನಿತ್ತು ಮಹೋಪಕಾರ ಮಾಡಿದರು.

ಬಸವನಾಳರು ಈಚೆಗೆ ಪ್ರಕಟಿಸಿದ 'ಬಸವಣ್ಣನವರ ವಚನಗಳು' ಗ್ರಂಥವೇ ಅವರ ಕೊನೆಯದಾಯಿತು. ಹತ್ತು ವರ್ಷಕಾಲ ಸತತವಾಗಿ ಶ್ರಮಪಟ್ಟು, ಅನೇಕ ತಾಳೇಗರಿ ಗ್ರಂಥಗಳನ್ನು ಕಲೆಹಾಕಿ, ಅಕ್ಷರ ಅಕ್ಷರ ವನ್ನೂ ಎಚ್ಚರಿಕೆಯಿಂದ ನೋಡಿ ಬಸವನಾಳರು 'ಬಸವಣ್ಣನವರ ವಚನಗಳ' ಶುದ್ಧಪ್ರತಿಯನ್ನು ಸಿದ್ಧಗೊಳಿಸಿದರು. ಬಸವಭಕ್ತರಾದ ಬಸವನಾಳರ

ಸೇವೆಯಿಂದ ಸುಪ್ರೀತರಾದ ಬಸವಣ್ಣನವರು ಅವರಿಗೆ ಶಾಂತಿಯನ್ನನುಗ್ರಹಿಸಿದರು ಎಂದು ಹೇಳೋಣವೇ ?

ಈ ಚಟುವಟಿಕೆಗಳ ಜತೆಗೆ ಒಂದು ಮುದ್ರಣಾಲಯ ನಡೆಸಿಕೊಂಡು ಹೋಗುವ ಕಾರ್ಯಭಾರವೂ 'ಜಯ ಕರ್ನಾಟಕ' ಪತ್ರಿಕೆಯ ಸಂಪಾದಕತ್ವವೂ ಬಸವನಾಳರ ಕೊರಳಿಗೆ ಬಿತ್ತು.

'ಕರ್ನಾಟಕ ವಿಶ್ವವಿದ್ಯಾನಿಲಯ'ದ ಸ್ಥಾಪಕರಲ್ಲಿ ಬಸವನಾಳರೊಬ್ಬರು. ಮುಂಬಯಿ ಸೆನೆಟ್ ಸಭೆಯಲ್ಲಿ ಈ ವಿಷಯ ಬಸವನಾಳರು ಪ್ರಸ್ತಾಪಿಸಿ, ಕನ್ನಡಿಗರ ನ್ಯಾಯವಾದ ಹಕ್ಕು ಬಾಧ್ಯತೆಗೆ ಹೋರಾಡದಿದ್ದ ದಿನವೇ ಇಲ್ಲ. ಅವರ ಪ್ರಯತ್ನದಿಂದಾಗಿ ಕರ್ನಾಟಕಕ್ಕೆ ಒಂದು ವಿಶ್ವವಿದ್ಯಾನಿಲಯವೂ ಲಭಿಸಿತು.

ರಬಕವಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಬಸವನಾಳರು ಅಧ್ಯಕ್ಷರಾಗಿ ಪಾಂಡಿತ್ಯಪೂರ್ಣವೂ, ಪ್ರಗತಿಪರವೂ ಆದ ಭಾಷಣಮಾಡಿ ಕನ್ನಡಿಗರನ್ನು ಎಚ್ಚರಿಸಿದರು. ಬಸವನಾಳರ ಮಾತುಗಾರಿಕೆ ಅವರ ವಿದ್ವತ್ತು, ಸುಸಂಸ್ಕೃತಿ, ಪವಿತ್ರಮನಸ್ಸಿನ ಪ್ರತೀಕಗಳಾಗಿರುತ್ತಿದ್ದವು. ಬಸವನಾಳರು ಬಿ. ಎಂ. ಶ್ರೀ, ಸಿ. ಕೆ. ವೆಂ, ಮುದವೀಡು ಕೃಷ್ಣರಾಯರಂತೆ ವಾಗ್ಮಿಗಳಲ್ಲ. ಅವರ ಮಾತುಗಾರಿಕೆ ಸಹಜ ಸುಂದರ. ಸಾಮಾನ್ಯರಿಗೂ ಅರ್ಥವಾಗುವ ರೀತಿಯಲ್ಲಿ ರಸವತ್ತಾಗಿ ವಿಷಯ ನಿರೂಪಿಸುತ್ತಿದ್ದರು. ಮಾಸ್ತಿಯವರ ಮಾತುಗಾರಿಕೆಗೆ ಬಸವನಾಳರ ಮಾತುಗಾರಿಕೆಯನ್ನು ಹೋಲಿಸಬಹುದು. ಮುತ್ತು ಪೋಣಿಸಿದಂತೆ ಶಬ್ದ ಜೋಡಣೆ.

ಬಸವನಾಳರಲ್ಲಿದ್ದ ಎಲ್ಲ ಗುಣಗಳಿಗಿಂತ ದೊಡ್ಡದು ಅವರ ಸತ್ಯಪ್ರಿಯತೆ ಹಾಗೂ ಸಹೃದಯತೆ. ಉತ್ತರ ಕರ್ನಾಟಕದ ಸಂಗೀತ ಪ್ರೇಮಿಗಳೊಮ್ಮೆ ಸಂಗೀತರತ್ನ ಮಲ್ಲಿಕಾರ್ಜುನ ಮನ್ಸೂರ್ ಅವರಿಗೆ ನಿಧಿಯರ್ಪಿಸಲು ಸಭೆ ಕರೆದರು. ಅಂದಿನ ಸಭೆಗೆ ನಾನು ಅಧ್ಯಕ್ಷ, ಬಸವನಾಳರು ಭಾಷಣಕಾರರು. ಬಸವನಾಳರು ಹೇಳಿದರು : 'ಮನ್ಸೂರ್ ಅವರು ಘನ ವಿದ್ವಾಂಸರೆಂದು ಅಧ್ಯಕ್ಷರು ಹೇಳಿದ್ದಾರೆ. ಅವರು ಕನ್ನಡ ನಾಡಿನಲ್ಲಿ ಕನ್ನಡ ನಾಡಿನ ಹೊರಗೆ ಅನೇಕ ಕಛೇರಿಗಳನ್ನು ಮಾಡಿ ಕೀರ್ತಿಗಳಿಸಿದ್ದಾರೆಂಬುದನ್ನೂ ಬಲ್ಲೆ. ನನಗೆ ಸಂಗೀತ ಗೊತ್ತಿಲ್ಲವಾದ್ದರಿಂದ ಅವರ ಯೋಗ್ಯತೆಯ ಮಟ್ಟವೆಂಥದು

ಎಂದು ಹೇಳಲಾರೆ. ಆದರೆ ಮನ್‌ಸೂರ್ ಅವರ ಕನ್ನಡದ ವಚನಗಳು, ರಗಳೆಗಳು ಹಾಡಿದಾಗ ಹೃದಯ ಬಿರಿಯುತ್ತದೆ. ಜೀವಕ್ಕೆ ಹೊಸ ಚೈತನ್ಯ ಬರುತ್ತದೆ. ಮನಸ್ಸಿಗೊಂದು ಬಗೆಯ ದಿವ್ಯಾನಂದಾನುಭವವಾಗುತ್ತದೆ. ಇದು ನನ್ನ ಅನುಭವ. ಇದಕ್ಕೇ ಒಳ್ಳೆಯ ಸಂಗೀತ ಎಂದು ನೀವು ಹೇಳುವುದಾದರೆ ಮನಸೂರ್ ಅವರು ಒಳ್ಳೆಯ ಸಂಗೀತಗಾರರು ಎನ್ನುವುದರಲ್ಲಿ ಯಾವ ಸಂದೇಹವೂ ಇಲ್ಲ.'

ಕಳೆದ ವರ್ಷ ಅಕ್ಟೋಬರ್ ತಿಂಗಳಲ್ಲಿ ನಾನು ಧಾರವಾಡಕ್ಕೆ ಹೋಗಿದ್ದೆ. ಹೋದ ಕೂಡಲೆ ಬಸವನಾಳರನ್ನು ನೋಡಲಾಗಲಿಲ್ಲ. ಮಾರನೆಯ ದಿನ ಬೆಳಿಗ್ಗೆ ಊರಿನಲ್ಲಿ ಸಂಭ್ರಮ. ಮುನಿಸಿಪಲ್ ಆಸ್ಪತ್ರೆಯ ಉದ್ಘಾಟನೆ ಮುಂಬಯಿ ಗವರ್ನರರಿಂದ ಆಗುವದಿತ್ತು. ನಾನು ಗೆಳೆಯ ತರೀಕೆರೆ ಶಿವಲಿಂಗಯ್ಯನವರ 'ಕರ್ನಾಟಕ ಸಾಹಿತ್ಯ ಮಂದಿರ'ದಲ್ಲಿದ್ದಾಗ ಬಸವನಾಳರು, ಬುದ್ಧಯ್ಯನವರೊಡನೆ ಬಂದರು. ಜಿನುಗು ಮಳೆ ಜೇರೆ ಬರುತ್ತಿತ್ತು. ಬಸವನಾಳರಿಗೆ ಆರೋಗ್ಯವಿರಲಿಲ್ಲವೆಂದು ಕೇಳಿದ್ದೆ. ಮಳೆಯಲ್ಲಿ ಮನೆಬಿಟ್ಟು ಹೊರಬಿದ್ದರಲ್ಲಾ ಎಂದು ವಿಷಾದದಿಂದ 'ಗೌವರ್ನರ ಉತ್ಸವಕ್ಕೆ ಬಂದಿದ್ದಿರಾ?' ಎಂದು ಕೇಳಿದೆ. 'ಇಲ್ಲ – ನಿಮ್ಮನ್ನು ನೋಡಲಿಕ್ಕೆ ಬಂದೆ. ಗೌವರ್ನರ ಭೆಟ್ಟಿಯಿಂದ ನನಗೆ ಆಗಬೇಕಾದದ್ದೇನು ? ಊರಿಗೆ ನೀವು ಬಂದಿದ್ದೀರಿ ಎಂದು ತಿಳಿಯಿತು' ಎಂದರು. ಅವರ ಸ್ನೇಹ ಸಹವಾಸದಲ್ಲಿ ನಾನು ಕಳೆದಿರುವ ರಸ ನಿಮಿಷಗಳು ಒಂದಲ್ಲ ಎರಡಲ್ಲ. ಎಂಥ ಪರೀಕ್ಷಾ ಸಮಯ ಬಂದರೂ ಧೃತಿಗೆಡದೆ, ಸೌಜನ್ಯ ಕಳೆದುಕೊಳ್ಳದೆ ಇರುವ ಹೆಚ್ಚುಗಾರಿಕೆ ಬಸವನಾಳರದಾಗಿತ್ತು. ಅದೇ ತಾನೆ ಕರ್ನಾಟಕ ವಿಶ್ವವಿದ್ಯಾನಿಲಯ ಉಪಸ್ಥಾನಪತಿಗಳ ಚುನಾವಣೆಯಾಗಿತ್ತು, ಬಸವನಾಳರಿಗೆ ಸೋಲಾಗಿತ್ತು. ನನ್ನ ವಿಷಾದ ವ್ಯಕ್ತಮಾಡುತ್ತಾ 'ನಿಮ್ಮಿಂದ ಅನೇಕ ಬಗೆಯಲ್ಲಿ ಉಪಕೃತರಾದವರು ನಿಮ್ಮ ವಿರುದ್ಧವಾಗಿ ಓಟು ಮಾಡಿದರೆಂದು ತಿಳಿದುಬಂತು. ವಿದ್ಯಾವಂತರೆನ್ನಿಸಿಕೊಂಡವರಿಗೂ ತಾರತಮ್ಯ ಜ್ಞಾನ ಬೇಡವೇ?' ಎಂದು ಕೇಳಿದೆ. ಬಸವನಾಳರ ಮುಖ ಗಂಭೀರವಾಯಿತು. ಧ್ವನಿ ಭಾರವಾಯಿತು. 'ನನಗೂ ಅದೇ ದುಃಖ. ಎಲೆಕ್ಷನ್ನಿನಲ್ಲಿ ಸೋತನೆಂದು ವಿಷಾದಪಡುವುದಿಲ್ಲ. ಅದರೆ ನನಗೆ ಮಾತುಕೊಟ್ಟವರೇ ಕೈಕೊಟ್ಟ

ರಲ್ಲಾ ಎಂದು ದುಃಖವಾಗಿದೆ.—ಇದು ಒಳ್ಳೆಯದಕ್ಕೇ ಆಯಿತು ಬಿಡಿ. ನನ್ನ ಮಿತ್ರರಲ್ಲಿಯೇ ನಾನು ನನ್ನ ಶ್ರದ್ಧೆ, ಕರ್ತವ್ಯದಕ್ಷತೆ, ಯೋಗ್ಯತೆಗಳ ಬಗ್ಗೆ ಸಾಕಷ್ಟು ನಂಬಿಕೆ ಹುಟ್ಟಿಸಿಲ್ಲವೆಂದು ಕಾಣುತ್ತದೆ.' ಎಂದರು.

ಬಸವನಾಳರನ್ನು ಕುರಿತು ಪ್ರಸ್ತಾವಿಸುವಾಗ ಅವರ ಸೋದರರ ಬಗ್ಗೆ ಒಂದು ಮಾತು ಹೇಳಬೇಕಾದುದು ಅವಶ್ಯಕ. ವಕೀಲ ಬಸವನಾಳರು ಇಂದು ಕೆ.ಪಿ.ಸಿ. ಬ್ಯಾಂಕಿನ ಮ್ಯಾನೇಜಿಂಗ್ ಡೈರೆಕ್ಟರರಾಗಿದ್ದಾರೆ. ಸಹಕಾರ ಚಳುವಳಿಗೆ ಇವರು ಅಪಾರ ಸೇವೆ ಸಲ್ಲಿಸಿದ್ದಾರೆ. ಅಣ್ಣತಮ್ಮಂದಿರು ಸ್ನೇಹಿತರಂತೆ ಪರಸ್ಪರ ವಿಶ್ವಾಸ, ಗೌರವ ತಳೆಯುವುದು ಸಾಧ್ಯವೇ ಎಂದು ಶಂಕೆ ಪಡುವವರು ಈ ಸೋದರರನ್ನು ನೋಡಬೇಕಾಗಿತ್ತು. ಇವರಿಬ್ಬರನ್ನೂ ರಾಮಲಕ್ಷ್ಮಣರಿಗೆ ಹೋಲಿಸಿದರೆ ಉತ್ಪ್ರೇಕ್ಷೆಯಾಗುವುದಿಲ್ಲ.

ಕನ್ನಡನಾಡನ್ನು ಕಟ್ಟಿದ ಮಹಾಶಿಲ್ಪಿಗಳಲ್ಲಿ ಒಬ್ಬರಾದ ಬಸವನಾಳರು ಇಂದು ಇಲ್ಲವಾಗಿದ್ದಾರೆ. ಆದರೆ ಅವರು ಕಟ್ಟಿದ ಕನ್ನಡಗುಡಿಗಳು ಅವರ ಕೀರ್ತಿ ಕಳಶಗಳಾಗಿ ನಿಂತಿವೆ. ಅವರ ಶಿಷ್ಯರಾಗಿದ್ದು ಕೃತಾರ್ಥರಾಗಿರುವ ನೂರಾರು ಜನ ಬಸವನಾಳರ ಅಮರತ್ವದ ಪ್ರತೀಕಗಳಾಗಿದ್ದಾರೆ. ಗೆಳೆಯರ ಮನಸ್ಸಿನಲ್ಲಿ ಅವರು ಬಿತ್ತಿದ ಒಲವು ಚೆಲುವು ಅವರ ಜೀವನದ ಸುಂದರ ಕಥೆಯನ್ನು ನಿತ್ಯ ಸಾರುತ್ತಿವೆ.

ಕರ್ಮಯೋಗಿಗಳಂತೆ ಬಾಳಿ, ಶರಣರಂತೆ ಮರಣ ಕಂಡ ಬಸವನಾಳರು ಕರ್ಮ ಕದಳಿಯನ್ನು ದಾಟಿ ಜೀವನ್ಮುಕ್ತರಾಗಿದ್ದಾರೆ. ಕನ್ನಡದ ಬದುಕನ್ನು ಶಾಶ್ವತಗೊಳಿಸಿದ ಈ ಮಹಾನುಭಾವರ ದಿವ್ಯ ಜೀವನ ನಾಡಿನ ಸಂಜೀವನವಾಗಲಿ.

---

# ೨. ಸಾಹಿತ್ಯ ಮತ್ತು ಯುಗಧರ್ಮ

ಕಾವ್ಯರಮಣಿ ಚಿರಂತನ ಸುಂದರಿಯಾಗಿದ್ದಾಳೆ, ನವನವೋನ್ಮೇಷ ಶಾಲಿನಿಯಾಗಿದ್ದಾಳೆ, ಅಮೃತಸ್ತನ್ಯಪಾನ ಮಾಡಿದ ಯುವತಿಯಾಗಿದ್ದಾಳೆ. ಅವಳ ಹಾಸ ಹ್ರಾಸ; ಒಲುಮೆ ಬಲುಮೆ; ಒನಪು ವೈಯಾರಗಳೇ ಕವಿಯ ಸ್ಫೂರ್ತಿಕೇಂದ್ರಗಳು. ಅವಳ ಭಾವದ ಬೆಡಗು, ಬಿಂಕದ ಕೊಂಕು, ಸ್ವಚ್ಛಂದ ಲೀಲಾವಿಲಾಸದ ರಸರಮಣೀಯತೆಗಳನ್ನು ಬಣ್ಣಿಸುವುದರಲ್ಲಿಯೇ ಕವಿಗೆ ಕೈಲಾಸ.

ತನ್ನ ರೂಪಯೌವನದ ಗಾಡಿಯಿಂದ ಜನರಿಗೆ ಮೋಡಿಮಾಡುವ ಅಪೂರ್ವಶಕ್ತಿಶಾಲಿನಿ ಅವಳು. ಅಂಥವಳನ್ನೂ ಅಬಲೆಯೆನ್ನುವ 'ಎಂಟೆರ್ದೆ' ತೋರಿದವನು ಕನ್ನಡ ರನ್ನ. 'ಸರಸತಿಯನಬಲೆಯಂ ಗೋಣ್ ಮುರಿಗೊಂಡರ್ಥಕ್ಕೆ ಕುದಿದು ನೋಯಿಸುವವನಕ್ಕರಿಗನೆ?' ಎಂದು ರನ್ನ ಕೇಳುತ್ತಾನೆ. ಈ ಸಂಪ್ರದಾಯದಲ್ಲಿ ಬೆಳೆದು ಬಂದ ಕವಿಗಳು ಪಾಪ-ಪುಣ್ಯದ ತಕ್ಕಡಿ ಹಿಡಿದು ಕಾವ್ಯದ ಯೋಗ್ಯತೆಯನ್ನು ಅಳೆಯಲು ಯತ್ನಿಸಿದರು. ಶುಷ್ಕ ವೈಯಾಕರಣಿಗೆ, ಶುಷ್ಕ ತಾರ್ಕಿಕನಿಗೆ ಕಾವ್ಯರತ್ನ ವಿಷಯವಲ್ಲ — ಅದು ಅತಿ ಚತುರಕವಿಕದಂಬಕವಿಷಯವೆಂದು ಪಂಪ, ಸಾರಿಬಿಟ್ಟ.

"ಕೇಳಲೊಡಂ ಕಿವಿ ಸವಿಯೊಳ
ಗಾಳದೊಡಂ ತನ್ಮನಂ ಮುಳುಂಗದೊಡಂ ಸ-
ಖ್ಯಾಳಂಬಿಯೆನಿಪ ಚಿತ್ತಂ
ಲೀಲೆಯೊಳವಗಾಹವಿರದೊಡದು ಸತ್ಕೃತಿಯೇ"

ಎಂದು ಕೇಳಿದ ಹರಿಹರನೂ ಕಾವ್ಯರಸಾಸ್ವಾದನದಿಂದಾಗುವ ಸೌಖ್ಯ (ಆನಂದ)ದ ಕಡೆಗೇ ನಮ್ಮ ಲಕ್ಷ್ಯ ಸೆಳೆದಿದ್ದಾನೆ. ಉತ್ತಮ ಕಾವ್ಯದಲ್ಲಿರ ಬೇಕಾದ ಅನೇಕ ಲಕ್ಷಣಗಳನ್ನು ವರ್ಣಿಸಿರುವ ರಾಘವಾಂಕನೂ 'ಸುಳಿ

ಸುಖಂ ನಿಳಯವಂತಪ್ಪ' ಎಂದು ಸೌಖ್ಯದ ಕಡೆಗೇ ನಮ್ಮ ಗಮನ ಸೆಳೆಯುತ್ತಾನೆ.

"ರಸಜೀವ ಭಾವವೊಡಲರ್ಥವವಯುವ ಶಬ್ದ
ವಿಸರವೇ ನುಡಿಯಲಂಕಾರವೇ ತೊಡಗೆಯು ತ -
ವೆ ಸುಲಕ್ಷಣವೆ ಲಕ್ಷಣ ವಿಮಳ ಪದನ್ಯಾಸ ನಡೆ ರೀತಿ
ಸುಕುಮಾರತೆ ‖
ರಸಿಕತನ ಸುಳಿ ಸುಖಂ ನಿಳಯವಂತಪ್ಪ ಈ
ಪೊಸ ಕಾವ್ಯಕನ್ನಿಕೆಯ......................."

ಓದುಗನ ಮನಸ್ಸಿನಲ್ಲಿ ಸುಖವನ್ನುಂಟುಮಾಡುವುದೂ ಅವನಲ್ಲಿ ಪಾಪ - ಪುಣ್ಯದ ತಾರತಮ್ಯಜ್ಞಾನವನ್ನು ಹುಟ್ಟಿಸುವುದೂ ಕಾವ್ಯದ ಮುಖ್ಯ ಲಕ್ಷಣವೆಂದು ಹೆಚ್ಚುಕಡಿಮೆ ಕನ್ನಡದ ಪ್ರಾಚೀನ ಕವಿಗಳು ಒಪ್ಪಿಕೊಂಡಿದ್ದಾರೆ.

ಈ ಭಾವನೆಯ ಉಗಮಸ್ಥಾನವನ್ನು ಕಾಣಲು ನಾವು ನೃಪತುಂಗನಿಗಿಂತಲೂ ಹಿಂದಿದ್ದ ಭರತಮುನಿಯ ದೃಷ್ಟಿಯ ಕಡೆಗೆ ಗಮನಕೊಡಬೇಕು. ನಾಟಕದಲ್ಲಿ ದುಃಖ ಗೌಣಸ್ಥಾನ ಪಡೆದಿರಬೇಕು, ನಾಟಕ ಸುಖಪರ್ಯವಸಾಯಿ ಆಗಬೇಕೇ ವಿನಾ ದುಃಖಪರ್ಯವಸಾಯಿ ಆಗಬಾರದು ಎನ್ನುವುದು ಭರತಮುನಿಯ ಮತ್ತು ಅವನ ತರುವಾಯದ ಲಕ್ಷಣಶಾಸ್ತ್ರಜ್ಞರ ಅಭಿಮತವಾಗಿತ್ತು. ಮೊದಲಿನಿಂದ ಕೊನೆಯವರೆಗೂ ವಿಷಾದದಿಂದ ಕೂಡಿದ ದುಷ್ಯಂತ, ಹರಿಶ್ಚಂದ್ರ, ಪಾಂಡವರು ಇವರ ಕಥೆಗಳೂ ಸುಖದಲ್ಲಿಯೆ ಮುಕ್ತಾಯಗೊಂಡಿವೆ.

ಪ್ರಾಚೀನ ಕವಿಗಳು ಜೀವನದ ರುದ್ರತೆಯನ್ನು ಉಪೇಕ್ಷಿಸಿದ್ದರು ಅಥವಾ ಜೀವನದ ರುದ್ರತೆಯನ್ನು ಎದುರಿಸಲು ಅಂಜುತ್ತಿದ್ದರು ಎಂದು ಭಾವಿಸುವುದು ತಪ್ಪಾದೀತು. ಭಾಸನ ಏಕಾಂಕ ನಾಟಕಗಳು, ವಿಶಾಖದತ್ತನ 'ಮುದ್ರಾರಾಕ್ಷಸ,' ಭಟ್ಟನ 'ವೇಣೀಸಂಹಾರ' ಶ್ರೇಷ್ಠವರ್ಗದ ರುದ್ರನಾಟಕಗಳಾಗಿವೆ. ಶೂದ್ರಕ ಜೀವನದ ಸಮಗ್ರತೆಯನ್ನು, ಜೀವನದ ಶುಚಿ ಅಶುಚಿಯನ್ನು, ಜೀವನದ ಋಜುತ್ವ ವೈಪರೀತ್ಯಗಳನ್ನು ಕಣ್ತುಂಬ

ಕಂಡು, ಮನತುಂಬುವಂತೆ ಬಣ್ಣಿಸಿರುವ ಸೀಮಾಪುರುಷ. ಆದರೆ ಇವು ಕೆಲವು ಅಪರೂಪದ ಅಪವಾದಗಳು.

ಜೀವನದ ಸುಕುಮಾರತೆಯ ಕಡೆಗೇ ಪ್ರಾಚೀನ ಕವಿಗಳಲ್ಲಿ ಹೆಚ್ಚಿನವರ ಲಕ್ಷ್ಯವಿತ್ತೆಂಬ ಮಾತು ನಿರ್ವಿವಾದ. ಇದಕ್ಕೆ ಕಾರಣವೂ ಸಾಕಷ್ಟು ಪ್ರಬಲ ವಾಗಿಯೆ ಇದೆ. ಕವಿಯೇನೊ ತನ್ನ ಆತ್ಮತೃಪ್ತ್ಯರ್ಥವಾಗಿ ಈಶತೃಪ್ತ್ಯರ್ಥವಾಗಿ 'ವಿಾಸಲುಗವಿತೆ' ರಚಿಸುತ್ತಿದ್ದ. ಆದರೆ ಕವಿಯ 'ಗೇಣು ಹೊಟ್ಟೆ' ತುಂಬು ತ್ತಿದ್ದವನು ದೊರೆ. ದೇವರನ್ನು ಮೆಚ್ಚಿಸುವುದಕ್ಕಿಂತಲೂ ಹೆಚ್ಚಾಗಿ ದೊರೆಯನ್ನು ಮೆಚ್ಚಿಸಬೇಕು. ಪಂಪ, ರನ್ನ, ಜನ್ನರಂಥ ಮಹಾಕವಿಗಳೂ ದೊರೆಯನ್ನು ಮೆಚ್ಚಿಸದೆ ಬಾಳಲು ಸಾಧ್ಯವಿರಲಿಲ್ಲ. ದೊರೆಯ ಆಸ್ಥಾನದಲ್ಲಿ ಗೋಳಿನ ಕತೆಯನ್ನುಸುರಲು ಸಾಧ್ಯವೇ? ದೊರೆಮನೆಯಲ್ಲಿ ಹಬ್ಬ ನಡೆದಾಗ, ದೊರೆ ವಿಜಯಯಾತ್ರೆ ಮುಗಿಸಿಕೊಂಡು ಬಂದಾಗ ಅವನ ಮನಮೆಚ್ಚಿಸಲು ದುರಂತ ಜೀವನಚಿತ್ರವನ್ನು ಕಾವ್ಯರೂಪದಲ್ಲಿ ಅರ್ಪಿಸಲು ಸಾಧ್ಯವೇ? ವಾತಾವರಣ, ಸನ್ನಿವೇಶಗಳೆರಡೂ ಪ್ರಾಚೀನ ಕವಿಗಳನ್ನು ಒಂದೇ ಜಾಡಿನಲ್ಲಿ ಒಯ್ಯುತ್ತಿದ್ದವು. ದೊರೆ ಮೆಚ್ಚಿ ಕವಿಗೆ ಪುರಸ್ಕಾರ ನೀಡಬೇಕು. ಅವನ ಆಸ್ಥಾನದ ಪಂಡಿತವರ್ಗ ಮೆಚ್ಚಿ 'ಅಹುದೆ'ನಬೇಕು. ಮಧುರನ ಮಾತೇ ಈ ಊಹೆಗೆ ಆಧಾರ.

> "ಪಂಡಿತರುಂ ವಿವಿಧ ಕಳಾ
> ಮಂಡಿತರುಂ ಕೇಳತಕ್ಕ ಕೃತಿಯುಂ ಕ್ಷಿತಿಯೊಳ್
> ಕಂಡರ್ ಕೇಳ್ವೊಡೆ ಗೂರವರ
> ದುಂಡುಚಿಯೋ ಬೀದಿವರೆಯ ಬೀರನ ಕತೆಯೋ?"

ಈ ಪರಿಸ್ಥಿತಿ ಅಸಹನೀಯವಾಗಿತ್ತೆಂದು ಹರಿಹರ ಸ್ಪಷ್ಟವಾಗಿ ಹೇಳಿದ್ದಾನೆ.

> "ನರರಂ ಸೇವಿಪ ಜೀಯಜೀಯೆನುತುಮಿರ್ಪೇನೆಂದೊಡಂ ದೈನ್ಯಮು-
> ಬ್ಬರಿಸುತ್ತುಂ ತನುಗುಂದಿಯುಂ ತನಗೆ ತಾನೆಂತಕ್ಕೆಯುಂ ಬೇಡುತಿ-
> ರ್ಪರವಂ ಸುಟ್ಟುಬಿಸುಟ್ಟು ಭಕ್ತಿಯೊಳಗೋಲಾಡಲ್ ಮನಂದಂದು ಶಂ
> ಕರನಂ ಶಾಶ್ವತನಂ ಕೃಪಾಜಲಧಿಯುಂ ಕಂಡೆಂ ವಿರೂಪಾಕ್ಷನಂ ॥"

"ಪಡಿಘಡ ಮಾನವರ್ ಕುಡುವರೆಂಬುದನಾಡದಿರೆನ್ನ ಮುಂದೆ, ಕ-
ಪ್ಪಡದ ಶರೀರಗಳ್ ತೃಣದ ಹಾಹೆಗಳಕ್ಕಟ! ಮಣ್ಣ ಬೊಂಬೆಗಳ್ ।
ಕುಡುವುವೆ ? ಬೇಡು ಬೇಡಿದುದನೀವ ಮಹಾನಿಧಿಯಂ ಮಹೇಶನಂ
ಮೃಡನನನೂನದಾನಿಯನಲಂಪಿನ ಪೆಂಪಿನ ಹಂಪೆಯಾಳ್ದನಂ ?"

ದೊರೆಯನ್ನೇ ದೇವರೆಂದು ಭಾವಿಸುತ್ತಿದ್ದ ಮನೋಭಾವ ಪ್ರಾಚೀನ ಸಾಹಿತ್ಯದ ಒಂದು ಮುಖವಾದರೆ, ದೇವರನ್ನೇ ದೊರೆಯೆಂದು ಭಾವಿಸುತ್ತಿದ್ದ ಮನೋಭಾವ ಇನ್ನೊಂದು ಮುಖ. ಮಧ್ಯಕಾಲದ ಶೈವ ವೈಷ್ಣವ ಸಾಹಿತ್ಯಗಳು ಮಾನವನ ಅಲ್ಪತನ, ಬಾಳಿನ ಕ್ಷಣಭಂಗುರತೆಯನ್ನು ಸಾರಿ ದೈವಶಕ್ತಿಯ ಹಿರಿಮೆಯನ್ನು ಎತ್ತಿತೋರಿದವು.

"ಅಕಟಕಟಾ ಶಿವ ನಿನಗಿನಿತು ಕರುಣವಿಲ್ಲ.
ಅಕಟಕಟಾ, ಶಿವ ನಿನಗಿನಿತು ಕೃಪೆಯಿಲ್ಲ.
ಏಕೆ ಹುಟ್ಟಿಸಿದೆ ಇಹಲೋಕ ದುಃಖಿಯ ಪರಲೋಕ ದೂರನ?
ಏಕೆ ಹುಟ್ಟಿಸಿದೆ ಕೂಡಲ ಸಂಗಮದೇವ ಕೇಳಯ್ಯಾ,
ಎನಗಾಗಿ ಮತ್ತೊಂದು ತರುಮೃಗಾದಿಗಳಿದ್ದಿಲ್ಲವೇ ?"

ಎಂದು ಬಸವಣ್ಣನವರು ಹಲುಬುತ್ತಾರೆ.

ಪುರಂದರದಾಸರು ಅಡಿಗಡಿಗೆ ನುಡಿಯುತ್ತಾರೆ :

"ಆರೇನು ಮಾಡುವರು ಅವನಿಯೊಳಗೆ
ಪೂರ್ವಜನ್ಮದ ಕರ್ಮ ಹಣೆಯಲ್ಲಿ ಬರೆದುದಕೆ ॥"

"ಹಿಗ್ಗುವೆ ಯಾಕೋ ಈ ದೇಹಕ್ಕೆ ಹಿಗ್ಗುವೆ ಯಾಕೋ ॥
ಹಿಗ್ಗುವ ತಗ್ಗುವ ಮುಗ್ಗುವ ಕುಗ್ಗುವ
ಅಗ್ನಿಯೊಳಗೆ ದಗ್ಧವಾಗುವ ದೇಹಕ್ಕೆ ॥"

"ಲೊಳಲೊಟ್ಟೆ, ಬದುಕು ಲೊಳಲೊಟ್ಟೆ ॥"

ಈ ದೇಹ ಅಸ್ಥಿರ, ಈ ಬಾಳು ಕ್ಷಣಿಕ ಎಂದು ಸಾರಿದ ಕವಿಗಳು ಇದಕ್ಕೊಂದು ಪರಿಹಾರೋಪಾಯವನ್ನೂ ಸೂಚಿಸಿದರು. ಈ ದೇಹ, ಈ ಬಾಳು, ಈ ಲೋಕದ ಅರಿವೆ ಮರೆತು ಅಗೋಚರನಾಗಿ, ಅವ್ಯಕ್ತನಾಗಿ – ಆದರೆ

ಅಣುರೇಣುತೃಣಕಾಷ್ಟಗಳಲ್ಲಿರುವ ಮುಕ್ಕಣ್ಣನನ್ನೋ ಮುಕುಂದನನ್ನೋ ಮರೆವೊಗುವುದು. ಇಂದಿನ ಜೀವನದ ಅಶಾಶ್ವತತೆಯನ್ನರಿತ ಕವಿ ಲೋಕಕ್ಕೆ ಮಾಡಿದ ಉಪಕಾರವೇನು ? ಅಶಾಶ್ವತವಾದ ಕಾಲಾವಧಿಯಲ್ಲಿ ಜೀವ ಹೇಗೆ ವಿಕಾಸವಾಗಬಹುದು, ಹೇಗೆ ತನ್ನಲ್ಲಿ ಸುಪ್ತವಾಗಿರುವ ಪರಮೇಷ್ಠಿಯನ್ನು ಕಂಡುಕೊಳ್ಳಬಹುದು ಎಂದು ತಿಳಿಸುವ ಗೋಜಿಗೆ ಹೋಗಲಿಲ್ಲ. ಕಂಡಿರುವ ಈ ಲೋಕ ಅನಿತ್ಯವಾದರೆ ಕಾಣದಿರುವ ಮುಂದಣ ಲೋಕ ನಿತ್ಯವೆಂದು ನಂಬುವುದಾದರೂ ಹೇಗೆ ?

ಪರಂಪರಾಗತವಾಗಿ ಬಂದ ಕರ್ಮಬಂಧವನ್ನೇ ಕವಿ ಜನಾಂಗದ ಮೇಲೆ ಮತ್ತಷ್ಟು ಬಿಗಿಯುತ್ತ ಬಂದ. 'ಇರುವ ನಾಲ್ಕು ದಿನ ಆದಷ್ಟು ಸುಖವಾಗಿರೋಣ' ಎಂದು ಭಾವಿಸುವವರು ಕೆಲವರಾದರು ; 'ಈ ನಾಲ್ಕು ದಿನದ ಬಾಳಿನ ಸುಖ ಮರೆತು ಶಾಶ್ವತ ಸುಖವನ್ನರಸೋಣ' ಎಂದು ಭಾವಿಸುವವರು ಕೆಲವರಾದರು. ಇಬ್ಬರೂ ಜೀವನವನ್ನು ಸರಿಯಾಗಿ ಎದುರಿಸಲಿಲ್ಲ.

ಭಾರತೀಯ ಕವಿಗಳ 'ಕರ್ಮವಾದ' ಕೇವಲ ಸಾಹಿತ್ಯ, ದರ್ಶನ ಪ್ರಪಂಚದಲ್ಲಿಯೇ ನಿಂತಿದ್ದರೆ ನಾವು ದುಃಖಪಡಬೇಕಾಗಿರಲಿಲ್ಲ. ಅದು ಭಾರತೀಯ ಜೀವನದ ಸಮಸ್ತವಾಹಿನಿಯಲ್ಲಿಯೂ ಪ್ರವಹಿಸಿತು. ಜನತೆಗೆ ಸುಳ್ಳು ವೈರಾಗ್ಯ ಬೋಧಿಸಿತು. ಈ ಸುಳ್ಳು ವೈರಾಗ್ಯ ಕಾಲಕಾಲಕ್ಕೆ ಭಾರತವನ್ನು ತುರುಕರು, ಮುಘಲರು, ಫ್ರೆಂಚರು, ಡಚ್ಚರು, ಆಂಗ್ಲರು ಮೊದಲಾದವರ ಪಾದತಲದಲ್ಲಿ ಹಾಕುತ್ತಬಂತು.

ಸಂಪ್ರದಾಯವಾದಿ ಒಂದು ಸವಾಲು ಹಾಕುತ್ತಾನೆ. 'ಬಾಳು ಶಾಶ್ವತವೇ ? ಅಶಾಶ್ವತ ಬಾಳುವೆಗಾಗಿ ಮಾನವ ತೊಳಲಾಡಬೇಕೇ ?' ಶಾಶ್ವತ – ಅಶಾಶ್ವತ ಮನುಷ್ಯನ ಬಾಳುವೆಯ ವರ್ಷಗಳನ್ನು ಅವಲಂಬಿಸಿಲ್ಲ. ಬಾಳುವೆಯ ರೀತಿಯನ್ನವಲಂಬಿಸಿದೆ. ಯೇಸು, ಶಂಕರಾಚಾರ್ಯ, ವಿವೇಕಾನಂದ ನೂರಾರು ವರ್ಷ ಬದುಕಲಿಲ್ಲ. ಆದರೆ ಅವರು ಬಾಳಿ ಬದುಕಿದ ಒಂದೊಂದು ಕ್ಷಣವೂ ಒಂದೊಂದು ಮಹಾಯುಗ – ಎಲ್ಲ ಮಾನವರೂ ಯೇಸು, ಶಂಕರಾಚಾರ್ಯ, ವಿವೇಕಾನಂದ ಆಗುವುದು ಸಾಧ್ಯವೇ ? — ಸಾಧ್ಯ — ಮತ್ತು ಸಾಧ್ಯವಿಲ್ಲ. ಅವರ ಸಾಧನೆಯಿದ್ದವರಿಗೆ ಸಾಧ್ಯ, ಆಲಸ್ಯ ಜೀವಿಗಳಿಗೆ ಸಾಧ್ಯವಿಲ್ಲ. ಇದು ವೈಯಕ್ತಿಕ ದೃಷ್ಟಿಯಾಯಿತು – ಸಾಮೂಹಿಕ

ದೃಷ್ಟಿಯೂ ಒಂದಿದೆ. ವ್ಯಕ್ತಿ, ವ್ಯಕ್ತಿಯಾಗಿ ದುರ್ಬಲನಾಗಿರಬಹುದು, ಆದರೆ ಸಮೂಹದ ಒಂದಂಶವಾಗಿ ಅವನು ಸಮೂಹದಷ್ಟೇ ಸಶಕ್ತನಾಗುತ್ತಾನೆ. ಇಂದಿನ ಗಿರಣಿಯ ಕಾಮುಗಾರ ವೈಯಕ್ತಿಕವಾಗಿ ತನ್ನ ಒಡೆಯನ ವಿರುದ್ಧ ಏನೂ ಮಾಡಲಾರ. ಒಡೆಯನ ಹಿಂದೆ ಧನಬಲವಿದೆ, ಅಧಿಕಾರಬಲವಿದೆ. ಆದರೆ ಗಿರಣಿ ಶ್ರಮಜೀವಿಗಳ ಸಂಘದ ಸದಸ್ಯನಾದ ಕಾಮುಗಾರ ಒಡೆಯನ ದೌರ್ಜನ್ಯವನ್ನೆದುರಿಸಬಲ್ಲ. ಅವನ ಹಿಂದೆ, ಇಡೀ ಶ್ರಮಜೀವಿವರ್ಗ ನಿಂತಿರುತ್ತದೆ.

ನಮ್ಮ ಜೀವನದ ಪ್ರತಿಯೊಂದು ಅಂಶದ ಮೇಲೂ ಸಾಮೂಹಿಕ ಭಾವನೆ ಪ್ರಭಾವಬೀರುತ್ತಿರುವುದನ್ನು ನಾವು ನೋಡಬಹುದು. ಲೋಕದ ಸ್ಥಿತಿಗತಿ ವೈಯಕ್ತಿಕ ಜೀವನವನ್ನು ಗೌಣಮಾಡಿ ಸಾಮೂಹಿಕ ಜೀವನಕ್ಕೆ ಮಹತ್ತ್ವ ಕೊಡುತ್ತಿದೆ. ವಿಶ್ವ ಒಂದು ಕುಟುಂಬ. ಇದರಲ್ಲಿ ದುಡಿಯುವವರು ದುಡಿಸಿಕೊಳ್ಳುವವರು ಎಂಬ ವಿಭೇದ ಇರಬಾರದು. ಎಲ್ಲರಿಗೂ ಸಮಾನ ಹಕ್ಕುಬಾಧ್ಯತೆ, ಜೀವನಾನುಕೂಲವಿರಬೇಕು ಎಂಬ ತತ್ತ್ವವನ್ನು ಕಾರ್ಲ್ ಮಾರ್ಕ್ಸ ಪ್ರತಿಪಾದಿಸಿದ. ಮಾರ್ಕ್ಸವಾದ ಪಾಶ್ಚಾತ್ಯ ಜಗತ್ತಿಗೆ ವಿನೂತ ನವೂ ಕ್ರಾಂತಿಯುತವೂ ಆಗಿ ಕಂಡು ಬಂದಿತು.

ಭಾರತೀಯ ಸಂಸ್ಕೃತಿಯ ಭದ್ರ ಬುನಾದಿಯೇ-ಯಾವುದನ್ನು ಇಂದು ನಾವು ಮಾರ್ಕ್ಸವಾದ (Marxism) ಎಂದು ಕರೆಯುತ್ತೇವೆಯೋ—ಆ ಮಾನವವಾದದ ಮೇಲೆ ನಿಂತಿದೆ. ಪ್ರಸ್ಥಾನತ್ರಯಗಳನ್ನು ಭಾರತ ಧರ್ಮದ ಅಸ್ತಿಭಾರವೆಂದು ನೆರೆನಂಬಿರುವ ನಾವು ಉಪನಿಷತ್ತಿನ ಸಂಸ್ಕೃತಿಯನ್ನು ನೋಡಬೇಕು. ಜಾತ್ಯಾತೀತವಾದ, ವರ್ಗಾತೀತವಾದ, ಸಾಮಾಜಿಕ ವ್ಯವಸ್ಥೆಯೇ ಮಾನವ ಕಲ್ಯಾಣದ ಮೂಲವೆಂದು ಪ್ರಾಚೀನರು ನಂಬಿದ್ದುದು ಮಾತ್ರವೇ ಅಲ್ಲ, ಅಂತೇ ನಡಸಿಕೊಂಡೂ ಬಂದರು. ಮಹಾಭಾರತ ಕಾಲದಲ್ಲಿ ಕೂಡ ಚಾತುರ್ವರ್ಣ್ಯಗಳು ಗುಣಕರ್ಮಾನುಸಾರವಾಗಿಯೇ ವಿಭಜಿಸಲ್ಪಟ್ಟಿದ್ದವು. ಮುಂದೆ ಸಾಮೂಹಿಕ ಭಾವನೆ ರಾಹುಗ್ರಸ್ತವಾಗಿ ವೈಯಕ್ತಿಕ ಭಾವನೆ ಬೆಳೆಯತೊಡಗಿದ ಮೇಲೆ ಉತ್ತಮ, ಕನಿಷ್ಠ ವರ್ಣಗಳೂ ವರ್ಗಗಳೂ ತಲೆಯೆತ್ತಿದ್ದವು. ರೈಕ್ವ, ಸತ್ಯಕಾಮಜಾಬಾಲಿಗಳಿಗೆ ಋಷಿಪಟ್ಟ ಕಟ್ಟಿದ

ಸಂಸ್ಕೃತಿ, ಮೈತ್ರೇಯಿ, ಗಾರ್ಗಿಯರನ್ನು ಬ್ರಹ್ಮವಾದಿನಿಯರೆಂದು ಒಪ್ಪಿಕೊಂಡ ಸಂಸ್ಕೃತಿ ಮಾರ್ಕ್ಸ್ ತತ್ವವನ್ನು ನಿತ್ಯಮಾಡಿತ್ತು.

ಇಂದು ನಮ್ಮ ಮುಂದೆ ಎರಡು ತತ್ವಗಳು ನಿಂತಿವೆ. ಸಾಹಿತಿ ಉಪನಿಷತ್ತಿನ ಋಷಿಗಳಂತೆ 'ಮಾನವವಾದಿ' ಯಾಗಬೇಕೇ—ಅಥವಾ—ತರುವಾಯದವರಂತೆ 'ವ್ಯಕ್ತಿವಾದಿ'ಯಾಗಬೇಕೇ ?

ವ್ಯಕ್ತಿವಾದಕ್ಕೆಡೆಕೊಡದಿದ್ದರೆ ಮಾನವ ಜೀವನವೆಲ್ಲಾ ಒಮ್ಮುಖವಾಗಿ ನೀರಸವಾಗುತ್ತದೆ. ಮಾನವರೆಲ್ಲ ಯಂತ್ರಗಳಂತೆ ಒಂದೇ ದೃಷ್ಟಿಯಲ್ಲಿ ವಿಚಾರಮಾಡತೊಡಗಿ ತಮ್ಮ ವಿಶಿಷ್ಟಶಕ್ತಿಯನ್ನು ಕಳೆದುಕೊಳ್ಳುತ್ತಾರೆ ಎನ್ನುವ ಆಕ್ಷೇಪಣೆಯನ್ನು ವ್ಯಕ್ತಿವಾದಿಗಳೆತ್ತುತ್ತಾರೆ.

ವ್ಯಕ್ತಿ, ಸಮಾಜ, ವಿಶ್ವ ಪರಸ್ಪರ ಅನುವರ್ತಿಗಳು, ಹಲವು ವ್ಯಕ್ತಿಗಳು ಸೇರಿದರೇ ಒಂದು ಸಮಾಜ ; ಹಲವು ಸಮಾಜಗಳು ಸೇರಿದರೇ ವಿಶ್ವ. ಆದರೆ ವ್ಯಕ್ತಿ ತನ್ನ ನಡೆ-ನುಡಿಯಲ್ಲಿ ವಿಶ್ವಕ್ಕೆ ಕಲ್ಯಾಣಮಾಡುವಂಥದು ಯಾವುದು ? ವಿಶ್ವದ ಪ್ರಗತಿಗೆ ಅಡ್ಡಿ ತರುವುದು ಯಾವುದು ? ಎಂದು ಯೋಚಿಸ ಬೇಕಾಗುತ್ತದೆ. ವಿಶ್ವಮುಖಿಯಾದ ವ್ಯಕ್ತಿ ತನ್ನ ವಿಶಿಷ್ಟ ವಿಚಾರ ಶಕ್ತಿಯಿಂದ ವಿಶ್ವದ ಹಿತವನ್ನೇ ಮುಂದುವರಿಸುತ್ತಾನೆ. ಗಾಂಧೀಜಿಯ ವಿಚಾರ ಸರಣಿ ವಿಶ್ವತೋಮುಖವಾಗಿತ್ತು ; ಅದನ್ನು ಕಾರ್ಯರೂಪಕ್ಕೆ ತರುವ ಬಗೆ ವೈಯಕ್ತಿಕವಾಗಿತ್ತು. ವಿಶ್ವದ ಮಹಾವೃಕ್ಷದಲ್ಲಿ ತಾನೊಂದು ಬೇರು ಎಂದು ಭಾವಿಸುವ ವ್ಯಕ್ತಿ, ತನ್ನ ಪ್ರತಿಭೆ, ಶಕ್ತಿ ತಪಸ್ಸನ್ನು ವಿಶ್ವಕಲ್ಯಾಣಕ್ಕೆ ಮೀಸಲು ಮಾಡುತ್ತಾನೆ. ವಿಶ್ವಶಕ್ತಿಯಿಂದ ಆವನ ಚೈತನ್ಯ ಬೆಳೆದಂತೆ, ಅವನ ತಪಸ್ಸಿನಿಂದ ವಿಶ್ವದ ಶಕ್ತಿಯೂ ವೃದ್ಧಿಯಾಗುತ್ತದೆ. ವಿಶ್ವಶಕ್ತಿಯನ್ನು ತನ್ನ ವೈಯಕ್ತಿಕ ಪ್ರಭಾವಪ್ರಸಾರಕ್ಕೆ ಉಪಯೋಗಿಸಿಕೊಳ್ಳುವ ವ್ಯಕ್ತಿ ಹಿಟ್ಲರ್, ಮುಸಲೋನಿಗಳಂತೆ ಲೋಕಕಂಟಕನಾಗುತ್ತಾನೆ.

ಈ ವಿಶ್ವರೂಪವೇ ಇಂದಿನ ಯುಗಧರ್ಮವೆಂದು ಹೇಳಬಹುದು. ಯುಗಧರ್ಮಕ್ಕೆ ಅನುಗುಣವಾಗಿ ಸಾಹಿತ್ಯನಿರ್ಮಾಣವಾಗಬೇಕು. ಅದು ದೊರೆಯನ್ನಾಗಲಿ ದೇವರನ್ನಾಗಲಿ ಮರೆವೊಗದೆ ಜನಪದವನ್ನು ಆಶ್ರಯಿಸ ಬೇಕು.

ಜನಪದದಲ್ಲಿ ಶಕ್ತಿ ಕುಂದಿದಾಗ, ನೀತಿ ಅಳಿದಾಗ, ಸ್ಥೈರ್ಯ ಲಯವಾದಾಗ, ಕವಿ ಅದಕ್ಕೆ ಶಕ್ತಿ, ನೀತಿ, ಸ್ಥೈರ್ಯ ನೀಡುತ್ತಾನೆ. ಸಂಗ್ರಾಮದಿಂದ, ರೋಗದಿಂದ, ಆರ್ಥಿಕ ವಿಪನ್ನಾವಸ್ಥೆಯಿಂದ ಜನಪದ ಕಳೆಗುಂದಿ ಕಂಗೆಟ್ಟು ಕುಳಿತಾಗ ಕವಿ ತನ್ನ ಪಾಂಚಜನ್ಯ ಊದುತ್ತಾನೆ. ಬಾಳಿನಲ್ಲಿ ಜಿಹಾಸೆ ಹೊಂದಿದವರ ಮನಸ್ಸಿನಲ್ಲಿ ಆಸೆಯಂಕುರಿಸುವಂತೆ ಮಾಡುತ್ತಾನೆ.

ಸಾಮಾನ್ಯರಿಗೆ ಗೋಚರವಾಗದೆಡೆ ಕವಿಯ ಅತಿಸೂಕ್ಷ್ಮ ಚೇತನಕ್ಕೆ ಸತ್ಯ, ಸೌಂದರ್ಯ, ಶಕ್ತಿ ಕಾಣಿಸುತ್ತದೆ. ತನ್ನ ಅನುಭವ ಹಲವರ ಅನುಭವವಾಗುವಂತೆ ತನ್ನ ನಿತ್ಯಾನಂದ, ನಿತ್ಯತೃಪ್ತಿ, ನಿತ್ಯತೇಜಸ್ಸು ಹಲವರದಾಗುವಂತೆ ಮಾಡುವದರಲ್ಲಿಯೇ ಕವಿ ಉದ್ಯುಕ್ತನಾಗುತ್ತಾನೆ.

ಸತ್ಯಸಾಧಕನಾದ ಕವಿ ಕೇವಲ 'ಅತಿ ಸುಳಿಸುಖಂ ನಿಳಯವಂತಪ್ಪ' ಕೃತಿಗಳನ್ನು ಮಾತ್ರ ರಚಿಸಲು ಸಾಧ್ಯವಿಲ್ಲ. ನಾವು ಜೋಲನ **ಜರ್ಮಿನಾಲ್** ಅಪ್ಟನ್ ಸಿಂಕ್ಲೇರನ **ಜಂಗಲ್** ಸಿಲಾನನ **ಫಾಂತೆಮಾರಾ** ಅಲೆಕ್ಸಾಂಡರ್ ಕುಪ್ರಿನ್ನನ **ಯಾಮಾ** ಗ್ರಂಥಗಳನ್ನೋದಿದಾಗ ನಮಗೆ ರಾಜಶೇಖರವಿಳಾಸ, ಭರತೇಶವೈಭವ, ಮೇಘದೂತ, ಹಾಫೀಸನ ದಿವಾನ್ ಓದಿದ ಸಂತೋಷ ಲಭಿಸುವದಿಲ್ಲ. ಬಡತನದ, ದಾರಿದ್ರ್ಯದ, ಮಿತವರಿಯದ ದುಡಿಮೆಯ, ಹೊಟ್ಟೆಗಾಗಿ ದೇಹಮಾರುವ ವ್ಯಾಪಾರದ ದುರಂತಚಿತ್ರಗಳನ್ನು ನೋಡಿದಾಗ ಮನಸ್ಸು ಮುದುಡುತ್ತದೆ. ಹೃದಯಕ್ಕೆ ಅತೀವ ಯಾತನೆಯಾಗುತ್ತದೆ. ಈ ಯಾತನೆಯನ್ನುಂಟುಮಾಡಿ ತೃಪ್ತನಾಗುವುದಷ್ಟೇ ಕವಿಯ ಉದ್ಯಮವಲ್ಲ. ನಮ್ಮ ಯಾತನೆ, ಕಳಕಳಿ ಕಾರ್ಯರೂಪಕ್ಕೆ ಬರಬೇಕು. ಮಾನವ ಜೀವನವನ್ನು ಅಧಃಪತನಕ್ಕೆಳೆಯುತ್ತಿರುವ ಪರಿಸ್ಥಿತಿಯನ್ನು ಸುಧಾರಿಸಬೇಕು. ಅಂಧಲೋಕದ ಕಣ್ಣು ತೆರೆಸುವ ಕೆಲಸವನ್ನು ಕವಿ ನಿರ್ವಹಿಸುತ್ತಾನೆ. ಚಾರ್ಲ್ಸ್ ಡಿಕೆನ್ಸ್ ತನ್ನ 'ಆಲಿವರ್ ಟ್ವಿಸ್ಟ್', 'ಗ್ರೇಟ್ ಎಕ್ಸಪೆಕ್ಟೇಷನ್ಸ್', 'ನಿಕ್ಲಾಸ್ ನಿಕಲಬಿ' ಮೊದಲಾದ ಕಾದಂಬರಿಗಳನ್ನು ಬರೆದಮೇಲೆ ರಾಯಲ್ ಕಮಿಶನನ್ನುಗಳೇರ್ಪಟ್ಟು ಸೆರೆಮನೆಯ ಸುಧಾರಣೆ, ಅನಾಥ ಬಾಲಕ ಬಾಲಿಕೆಯರ ಪರಿಸ್ಥಿತಿಯ ಸುಧಾರಣೆ ಕಾರ್ಯರೂಪಕ್ಕೆ ಬಂದವು. ರಿಚರ್ಡ ರೈಟ್, ಬೂಕರ್. ಟಿ. ವಾಷಿಂಗಟನ್ ಇವರ ಗ್ರಂಥಗಳು ನೀಗ್ರೋ ಜನರಲ್ಲಿ ಅಭೂತಪೂರ್ವ ಜಾಗೃತಿಯನ್ನುಂಟುಮಾಡಿದವು. ಸ್ಟಲಿನ್‌ಗ್ರಾಡ್ ಮಹಾ

ಸಮರದ ಅದ್ಭುತ ವಿಜಯಕ್ಕೆ ಎಲಿಯಾ ಏರನ್‌ಬರ್ಗ್, ಫೆಡಿನ್, ಷೋಲಾಕಾಫ್ ಇವರ ಗ್ರಂಥಗಳು ನೆರವಾದವು.

ಕವಿಯ ಸತ್ಯದೃಷ್ಟಿ, ನಿರ್ದಾಕ್ಷಿಣ್ಯ ನಿರೂಪಣೆ ತಾತ್ಕಾಲಿಕವಾಗಿ ಮನಸ್ಸಿಗೆ ವಿರಸವನ್ನುಂಟುಮಾಡಬಹುದು. ಆದರೆ ಕವಿ ಜನಾಂಗದ ಅವಿವೇಕ ಅಜ್ಞಾನಗಳಿಗೆ ಸೊಪ್ಪು ಹಾಕುತ್ತ ತನ್ನ ಸುಖ, ಶಾಂತಿಯನ್ನಷ್ಟೇ ಗಮನಿಸಿದರೆ ಲೋಕದಲ್ಲಿ ನಿತ್ಯತತ್ತ್ವಗಳು ಬಾಳುವುದೆಂತು ? ಮಾನವವರ್ಗ ಋಜುಮಾರ್ಗವನ್ನವಲಂಬಿಸುವುದೆಂತು ?

ಕವಿ ಜನಪದದ ಗುರುವೂ ಮಾರ್ಗದರ್ಶಕನೂ ಆಗಬೇಕು. ಲೋಕ ಬದುಕಿದರಲ್ಲವೇ ಅವನ ಕಾವ್ಯ ಬದುಕುವುದು.

---

# ೩. ಸಾಹಿತ್ಯದಲ್ಲಿ ವ್ಯಷ್ಟಿ, ಸಮಷ್ಟಿವಾದ

ಸುಮಾರು ನಾಲ್ಕು ದಶಕಗಳಿಂದ ವಿಶ್ವಸಾಹಿತ್ಯದಲ್ಲಿ ಅನೇಕ ವಾದಗಳು ಹೊರಟಿವೆ. ಮೊದಲನೆಯ ಮಹಾಯುದ್ಧವಾದ ಮೇಲೆ ಎರಡು ವಾದಗಳು ಸ್ಪಷ್ಟಗೊಂಡು ವಿಶೇಷ ಚರ್ಚೆಗೊಳಗಾದವು. ವ್ಯಷ್ಟಿ, ಸಮಷ್ಟಿಗಳಿಗೂ ಸಾಹಿತ್ಯಕ್ಕೂ ಇರುವ ಸಂಬಂಧವೇನು ? ಸಾಹಿತ್ಯ ವ್ಯಕ್ತಿಶಕ್ತಿಯ ಸಂಕೇತವೇ– ಸಂಘಶಕ್ತಿಯ ಪ್ರತೀಕವೇ ? ಸಾಹಿತ್ಯ ಪ್ರತಿಬಿಂಬಿಸಬೇಕಾದುದು ವ್ಯಕ್ತಿಯ ಸಂಸ್ಕಾರವನ್ನೇ ? – ಸಂಘದ ಸಂಸ್ಕೃತಿಯನ್ನೇ ? ಎರಡನೆಯ ಮಹಾಯುದ್ಧ ವಾದನಂತರವೇ ಈ ಸಮಸ್ಯೆ ವಿಶೇಷ ಪ್ರಾಧಾನ್ಯಕ್ಕೆ ಬಂದುದು. ಕಂದಾಚಾರ ಪದ್ಧತಿಗಳಿಂದಲೂ, ರಾಜ, ಶ್ರೀಮಂತರ ಸತತ ಸುಲಿಗೆಯಿಂದಲೂ ಶೋಷಿತ ವಾಗಿದ್ದ ರಷ್ಯಾ ೧೯೧೭ ಅಕ್ಟೋಬರ್ ತಿಂಗಳಲ್ಲಿ ಲೆನಿನ್ನನ ನಾಯಕತ್ವದಲ್ಲಿ ಜನಪದ ರಾಜ್ಯವನ್ನು ಸ್ಥಾಪಿಸಿತು. ಜರ್ಮನಿ ತನ್ನ ಅಪಾರಶಕ್ತಿಯನ್ನು ರಷ್ಯಾದ ಮೇಲೆ, ಎರಡನೆಯ ಮಹಾಯುದ್ಧದ ಕಾಲದಲ್ಲಿ ಪ್ರಯೋಗಿಸುವವರೆಗೆ ರಷ್ಯಾದ ಸಂಘಶಕ್ತಿಯ ವಿರಾಡ್ರೂಪದ ಅರಿವು ಯಾರಿಗೂ ಇರಲಿಲ್ಲ. ತನ್ನ ಅನ್ಯಾದೃಶ ವಿಜಯದಿಂದ ರಷ್ಯಾ ಸಂಘಶಕ್ತಿಯ ಹಿರಿಮೆಯನ್ನು ಜಗತ್ತಿಗೆ ಸಾರಿತು. ಈ ಮಹಾಶಕ್ತಿಯ ಬೆಳವಳಿಗೆಗೆ ಲೆನಿನ್, ಟ್ರಾಟ್ಸ್ಕಿ, ಸ್ಟಲಿನ್ ಮೊದಲಾದ ರಾಜಕಾರಣಪಟುಗಳ ಸಾಧನದಷ್ಟೇ ಗಣನೀಯ ವಾದದ್ದು ಗಾರ್ಕಿ, ಮಾಯಾಕೊವಸ್ಕಿ, ಅಲೆಕ್ಸಿ ಟಾಲಸ್ಟಾಯ್, ಇಲ್ಯ ಏರನ್‌ಬರ್ಗ್, ಫೆದಿನ್ ಮೊದಲಾದ ಕವಿವರರ ಸಾಧನ – ಕೃತಿವಿಲಾಸ. ರಷ್ಯಾಸಾಹಿತ್ಯದ ಸಾಂಘಿಕ ಮುಖದಕಡೆ ತಿರುಗಿದಂತೆ, ಅಮೇರಿಕಾ ಸಾಹಿತ್ಯದ ವ್ಯಕ್ತಿ ಮುಖದಕಡೆ ತಿರುಗಿತು. ಆದರೆ ಈ ವ್ಯಕ್ತಿವಾದ ಅಮೇರಿಕೆಗೆ ಸ್ವೈಸರ್ಗಿಕವಾದುದಲ್ಲ. ವಾಷಿಂಗ್‌ಟನ್, ಲಿಂಕನ್, ಜೆಫರ್‌ಸನ್ ಮೊದಲಾದ ಮಹಾಪುರುಷರಿಂದ ಕಟ್ಟಲ್ಪಟ್ಟ ಅಮೇರಿಕೆಯ ರಾಜಕೀಯಸೌಧ ಕ್ರಮಕ್ರಮೇಣ ತನ್ನ ಜಾನಪದ ಸ್ವರೂಪವನ್ನು ಕಳೆದುಕೊಂಡು ಬಂಡವಾಳ ಗಾರರ ಕೈಗೊಂಬೆಯಾಯಿತು. ಲಿಂಕನ್ ಕಟ್ಟಿದ ಜನತಾ ದೇವಾಲಯದಲ್ಲಿ

ಬಂಡವಾಳಗಾರರ, ದರೋಡೆಕೋರರ ಕುಟಿಲ ರಾಜಕಾರಣಿಗಳ ಪ್ರಳಯನೃತ್ಯ ಆರಂಭವಾಯಿತು. ಅಮೇರಿಕೆಯ ಪ್ರಾತಿನಿಧಿಕ ಸಾಹಿತ್ಯ (Representative Literature) ರುದ್ರಶಕ್ತಿಗಳೊಂದಿಗೆ ಬೆರೆತು ಅವರ ಮುಖವೀಣೆಯಾಗ ದಿದ್ದುದೊಂದು ಅಚ್ಚರಿ. ವ್ಹಿಟ್‌ಮನ್, ಫ್ರಾಸ್ಟ್, ಕಾರ್ಲ್ ಸಾಂಡ್‌ಬರ್ಗ್, ಜಾಕ್ ಲಂಡನ್, ಸ್ಟೈನ್‌ಬೆಕ್, ಹೌವರ್ಡ್ ಫಾಸ್ಟ್, ಕ್ಲಿಫರ್ಡ್ ಆಡೆಟ್ಸ್ ಜನಪದದ ರಾಯಭಾರಿಗಳಾಗಿ ವಿಶ್ವಶಾಂತಿ, ವಿಶ್ವಮೈತ್ರಿ, ವಿಶ್ವಪ್ರೇಮವನ್ನು ಸುಭಗವಾಗಿ ಸಾರಿದ್ದಾರೆ.

ಫ್ರಾನ್ಸಿನ ಮಹಾಕ್ರಾಂತಿಗೆ ಕಾರಣರೂ, ಆ ಕ್ರಾಂತಿಯನ್ನು ಸುಸಂಘಟನೆ ಮಾಡಿದವರು ವಾಲ್ಟೇರ್, ರೂಸೋ, ವಿಕ್ಟರ್ ಹ್ಯೂಗೋ, ಸ್ಟೆಂಡ್‌ಹಾಲ್ ಮೊದಲಾದ ಸಾಹಿತಿಗಳು. ಸಾಮ್ಯವಾದವನ್ನು ವೀರವಾಣಿಯಿಂದ ಸಾರಿದ ಫ್ರಾನ್ಸಿನಿಂದಲೇ ವ್ಯಕ್ತಿವಾದವೂ ಬಂದುದು ಆಶ್ಚರ್ಯಕರವಾಗಿದೆ. ಸರ್‌ರಿಯಲಿಸಂ (Sur-realism) ಎಕ್ಸಿಸ್ಟೆಂಟಲಿಸಂ ನ (Extentalism) ಪುರಸ್ಕರ್ತರಾದ ಡಾಲಿ, ಹೆನ್ರಿ ಮರ್ಗ್ಗರ್, ಸಾರ್ಟ್ರೆ ಜೀವನದಲ್ಲಿ ನೈರಾಶ್ಯ ವಾದವನ್ನು ಮೂಡಿ ಮರಣದ ಮಹಾವೈಭವವನ್ನು ಸಾರಿದರು. ಅವರ ವಿಚಾರಲಹರಿಯ ಪ್ರಾತಿನಿಧಿಕ ಕವಿಗಳೇ ಎಜ್ರಾಪೌಂಡ್ ಮತ್ತು ಟಿ. ಎಸ್. ಈಲಿಯಟ್.

ವ್ಯಕ್ತಿವಾದ ಎರಡು ಮುಖಗಳನ್ನು ಹೊತ್ತು ನಿಂತಿತು. ಒಂದು ಜೀವನದ ನಿರರ್ಥಕತೆ. ಮನುಷ್ಯಜೀವನ ಕ್ಷಣಿಕ, ಅದು ನಿರಾಶಮಯ. ಅದರಲ್ಲಿ ಏನೂ ಹುರುಳಿಲ್ಲ. ಮನುಷ್ಯರೆಲ್ಲಾ 'ಹುಲ್ಲು ಮಾನವರು (Strawmen) ಕನಸಿಗೂ ಕಣಸಿಗೂ, ಗುರಿಗೂ ಗನ್ಯಕ್ಕೂ, ಭಾವಕ್ಕೂ ಅನುಭಾವಕ್ಕೂ ಸಂಬಂಧವಿಲ್ಲ.

*Between the idea
And the reality
And the act
Falls the shadow

Between the conception
And the ereation

Between the emotion
And the response
Falls the shadow

Between the desire
And the spasm
Between the potency
And the existence
Between the essence
And the descent
Falls the shadow

For thine is
Life is
For thine is the

This is the way the world ends
This is the way the world ends
This is the way the world ends
Not with a bang but a whimper"

(T. S. Eliot)

ಎರಡು ಮಹಾಯುದ್ಧಗಳ ಮಧ್ಯೆ ಸಿಕ್ಕಿಕೊಂಡ ಈಲಿಯಟ್ ಜಗತ್ತಿನಲ್ಲಿ ದುಃಖವನ್ನಲ್ಲದೆ ಬೇರೆ ಏನನ್ನೂ ಕಾಣದೆ ಹೋದುದು ಅಚ್ಚರಿಯಲ್ಲ.

ಸಿ. ಡೇ. ಲೂಯಿ, ಸಾಂಡ್‌ಬರ್ಗ್, ಫ್ರಾಸ್ಟ್ ಇವರೂ ಎರಡು ಮಹಾಯುದ್ಧಗಳ ಮಧ್ಯದಲ್ಲಿ ಸಿಕ್ಕಿಕೊಂಡವರೇ. ಸಾವು ನೋವುಗಳನ್ನು, ಮಾನವನ ಅಸೀಮಕ್ರೌರ್ಯವನ್ನು, ರುದ್ರಶಕ್ತಿಯ ಪ್ರಚಂಡ ಪ್ರಾದುರ್ಭಾವವನ್ನು ಕಂಡವರೇ; ಅನುಭವಿಸಿದವರೇ. ಆದರೆ ಅವರು ಈಲಿಯಟ್‌ನಂತೆ ಅಳುತ್ತ ಕೂಡಲಿಲ್ಲ.

ಮಾನವನ ತ್ಯಾಗದಿಂದ ದೈತ್ಯಶಕ್ತಿ ಅಳಿದೇ ಅಳಿಯುತ್ತದೆ. ಇಂದು ಸ್ಮಶಾನಸದೃಶವಾದ ಜಗತ್ತು ನಾಳೆ ನಂದನವನವಾಗುತ್ತದೆ.

"Bayonets are closing round
I shrink ; yet I must ring
A living from despair
And out of steel a song

Though song, though breath be short,
I'll share not the disgrace
of those that ran away
Or never left the base.

Comrades, my tongue can speak
No comfortable words ;
Calls to a forlorn hope
Give work and not rewards.

Oh keep the sickle sharp
And follow still the plough :
Others may reap, though some
See not the winter through.

And if our blood alone
Will melt this iron earth,
Take it. It is well spent
Easing a saviour's birth."

(Cecil Day-Lewis)

ನಾವು ಇಂದು ನೆಡುವ ಆತ್ಮಾರ್ಪಣ ಸಸಿಯು ಇಂದೇ ಪೂತು ಫಲ ಕೊಡದಿರಬಹುದು. ಸಸಿ ನೆಡುವುದಕ್ಕೆ ಕೃಷಿಮಾಡಿದವರಿಗೆ ಅದರ ಲಾಭ ದೊರೆಯದಿರಬಹುದು. ಲಾಭ ಯಾರು ಅನುಭವಿಸಿದರೇನು ? 'ಕರ್ಮಣ್ಯೇ ವಾಧಿಕಾರಸ್ತೇ ಮಾಫಲೇಷು ಕದಾಚನ.'

ಕಾರ್ಲ್ ಸಾಂಡ್‌ಬರ್ಗ್ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿದ್ದಾನೆ. ಲೋಕದ ರಾಕ್ಷಸವ್ಯಾಪಾರ ಕಂಡು ನಿರ್ವಿಣ್ಣನಾದವನು ಈಲಿಯಟ್ ;

ನಾಳಿನ ಕಡೆಗೆ ಲಕ್ಷ್ಯವಿಟ್ಟವನು ಡೇ ಲೂಯಿ. ಇಂದಿನ ವೈಪರೀತ್ಯವನ್ನು, ಆಸುರೀಶಕ್ತಿಯನ್ನು ಪೂರ್ಣವಾಗಿ ಗ್ರಹಿಸಿರುವ ಕಾರ್ಲ್ ಸಾಂಡ್‌ಬರ್ಗ್ ಅದಕ್ಕೆ ಪ್ರತಿಷೇದವಾಗಿರುವ ದೈವೀಶಕ್ತಿಯ ಕಡೆ ನಮ್ಮ ಗಮನ ಸೆಳೆಯುತ್ತಾನೆ. ಆಸುರೀಶಕ್ತಿಯ ಪ್ರಾಗಲ್ಭ್ಯಕ್ಕೆ ಅಂಜಿ ದೈವೀಶಕ್ತಿ ಸೋಲನ್ನು ಒಪ್ಪಿಕೊಳ್ಳಬೇಕೇ ಎಂದು ಕೇಳುತ್ತಾನೆ.

"They tell me you are wicked and I believe them, for I have seen your painted women under the gas lamp luring the farm boys.

And they tell me you are crooked and I answer : yes, it is true I have seen the gunman kill and go free to kill again.

And they tell me you are brutal and my reply is ; On the faces of women aud children I have seen the marks of wanton hunger.

And having answered so I turn once more to those who sneer at this my city, and I give them back the sneer and say to them : Come and show me another city with lifted head singing so proud to be alive and coarse and strong and cunning

Flinging magnetic curses amid the toil of piling job on job, here is a tall bold slugger set vivid against the little soft cities ;

Fierce as a dog with tongue lapping for action, cunning as a savage pitted against wilderness,

Bareheaded, Shoveling, Wrecking, Planning

Building, breaking and rebuilding.

Under thd smoke, dust all over his mouth, laughing with white teeth,

Under the terrible burden of destiny laughing as a young man laughs,

Laughing even as an ignorant fighter laughs who has never lost a battle,

Bragging and laughing that under the wrist is the pulse, and under his ribs the heart of the people.

(Carl Sandberg - CHICAGO)

ಮಾನವತೆಯ ಪರಿಶುದ್ಧಾತ್ಮ ಒಳಗೆ ಮಿಡಿಯುತ್ತಲೇ ಇರುತ್ತದೆ. ಆ ನಾದತರಂಗಕ್ಕೆ ಪ್ರತಿಸ್ಪಂದಿಸಿದ ಕವಿಹೃದಯ ಧೈರ್ಯ ನೀಡುತ್ತಿದೆ, ಆಸೆತೋರುತ್ತಿದೆ, ಬೆಳಕು ಚೆಲ್ಲುತ್ತಿದೆ.

ಕವಿ ಇಲ್ಲಿ ಜನಪದದಿಂದ ದೂರನಿಂತ ವ್ಯಕ್ತಿವಾದಿಯಾಗುವುದಿಲ್ಲ. ಅವನು ಜನಪದದ ಪ್ರತಿನಿಧಿ, ವಾಣಿ, ರಾಯಭಾರಿ ಆಗುತ್ತಾನೆ; ಅವನೇ ಜನಪದವಾಗುತ್ತಾನೆ. ಫ್ರಾಸ್ಟ್ ಹೇಳುವಂತೆ ಜಗತ್ತಿಗೂ ಕವಿಗೂ ಸತತವಾಗಿ ಪ್ರೇಮ ಕಲಹ ನಡೆದಿರುತ್ತದೆ. ('I had a lover's quarrel with the world')

ಪಾಶ್ಚಾತ್ಯ ದೇಶಗಳಲ್ಲಿ ವ್ಯಕ್ತಿವಾದ, ಸಮಷ್ಟಿಯ ಕಲ್ಯಾಣದ ಎಲ್ಲೆಯಲ್ಲಿ ಅಡಕವಾಗಲಿಲ್ಲ. ವ್ಯಷ್ಟಿ ಸಮಷ್ಟಿಯನ್ನತಿಕ್ರಮಿಸಿ ನಿಂತ ಪಾಶ್ಚಾತ್ಯ ಜಗತ್ತು ನೀಷೆಯ 'ಅತಿಮಾನವ'ನ ಕೈಗೆ ಸಿಕ್ಕಿತು. ಇದರ ಪರಿಣಾಮವೇ ಹಿಟ್ಲರ್, ಮುಸಲೀನಿ, ಚರ್ಚಿಲ್ಲರ ಅವತಾರ.

ವ್ಯಕ್ತಿವಾದ ಕುಸಿದುಬಿದ್ದುದನ್ನು ನಾವೇ ಕಣ್ಣಾರೆ ನೋಡಿದಮೇಲೆ ನಮ್ಮ ದೃಷ್ಟಿ ಸಹಜವಾಗಿ ಸಮಷ್ಟಿವಾದ ಸಾರುತ್ತಿರುವ ರಷ್ಯಾದ ಕಡೆಗೆ ಹೊರಳಬೇಕಾದುದು ಸಹಜ. ಎರಡು ದಶಕಗಳಲ್ಲಿ ರಷ್ಯಾದಲ್ಲಿ ಸಾಮಾನ್ಯ ಮನುಷ್ಯನ ಆರ್ಥಿಕ ಪರಿಸ್ಥಿತಿ ಸುಧಾರಿಸಿ ಜೀವನದ ಮಟ್ಟ ಏರಿದೆಯೆಂದು ತಿಳಿದು ಬರುತ್ತದೆ. ಇದೇ ಪ್ರಮಾಣದಲ್ಲಿ ರಷ್ಯಾ ಜನತೆಯ ಬುದ್ಧಿಯ ಪ್ರಮಾಣ, ವಿಚಾರಸ್ವಾತಂತ್ರ ಬೆಳದಿದೆಯೇ ಎಂದು ನಾವು ವಿಚಾರ ಮಾಡಬೇಕು. ಸಾಹಿತ್ಯ, ರಾಜಕಾರಣ, ವಿಜ್ಞಾನ, ವಾಸ್ತುಶಿಲ್ಪ, ವೈದ್ಯ, ಇತರ ಎಲ್ಲಾ ವಿಷಯಗಳ ಪ್ರಗತಿಯೂ ಸ್ಟಲಿನ್ನನ ಅದ್ಭುತ ಮೇಧಾಶಕ್ತಿಯ ಪರಿಣಾಮವೆಂದು ರಷ್ಯಾ ಲೇಖಕರು ಸಾರುತ್ತಿರುವುದನ್ನು ನೋಡಿದಾಗ ರಷ್ಯಾ ಜನತೆಯಲ್ಲಿ ವಿಚಾರ ಸ್ವಾತಂತ್ರ್ಯ ಎಷ್ಟು ಬೆಳೆದಿದೆಯೆನ್ನುವುದನ್ನೂ,

ಬೆಳೆಯುವುದಕ್ಕೆ ಇಂದಿನ ರಷ್ಯನ್ ಸರಕಾರ ಎಷ್ಟು ನೆರವಾಗಿದೆಯೆನ್ನುವುದನ್ನೂ ನಾವು ಊಹಿಸಬಹುದು. ಅಲ್ಲಾನೇ ದೇವರು – ಮಹಮ್ಮದರೇ ಪೈಗಂಬರು ಎಂದು ಸಾರಿ, ಆ ಮತವನ್ನು ಒಪ್ಪಿಕೊಳ್ಳದಿರುವವರನ್ನು ಕಾಫಿರರೆಂದು ಕರೆಯುವ ಮನೋಭಾವಕ್ಕೂ 'ಕಮ್ಯುನಿಸ್ಟ್ ಮ್ಯೂನಿಫೆಸ್ಟೋ'ನೇ ಧರ್ಮ ಗ್ರಂಥ, ಸ್ಟಲಿನ್ನೇ ಪ್ರವಾದಿ ಎಂದು ಸಾರುವ ರಷ್ಯಾದ ಮನೋಭಾವಕ್ಕೂ ಏನೂ ವ್ಯತ್ಯಾಸವಿರುವಂತಿಲ್ಲ.

ಪಾಶ್ಚಾತ್ಯದೇಶಗಳ ವ್ಯಷ್ಟಿವಾದ, ರಷ್ಯಾದ ಸಮಷ್ಟಿವಾದ ಎರಡಕ್ಕೂ ತಾಳಮೇಳವಿಲ್ಲದಿರುವುದೇ ಅವರಲ್ಲಿ ಉದ್ಭವಿಸುತ್ತಿರುವ ನೂರಾರು ಸಮಸ್ಯೆ ಗಳಿಗೆ ಕಾರಣವಾಗಿದೆ. ಈ ದೇಶಗಳ ವಿಚಾರಲಹರಿಯನ್ನು ಭಾರತ ಅನುಕರಿಸಿದರೆ ಅದರ ವಿನಾಶ ಸ್ವತಸ್ಸಿದ್ಧವಾಗುತ್ತದೆ.

ಭಾರತವೊಂದೇ ವ್ಯಷ್ಟಿ, ಸಮಷ್ಟಿವಾದಗಳಿಗೆ ಸೇತುವೆ ಕಟ್ಟಿರುವುದು. ವ್ಯಕ್ತಿ ಬೆಳೆಯಬೇಕು, ಅದು ಸಹಜ ಹಾಗೂ ಆವಶ್ಯಕ. ಯಾವ ದೃಷ್ಟಿಯಲ್ಲಿ? – ಹಿಟ್ಲರಿನಂತೆ ವಿನಾಶಕ್ಕಾಗಿಯಲ್ಲ. ಆಸುರೀಪ್ರವೃತ್ತಿಯನ್ನಿಟ್ಟುಕೊಂಡು ಬೆಳೆವ ವ್ಯಕ್ತಿ ಲೋಕಕಂಟಕನಾಗುತ್ತಾನೆ. ವ್ಯಕ್ತಿ ರುದ್ರನಾಗಿಯಲ್ಲ – ಶಿವನಾಗಿ, ಬೆಳೆಯಬೇಕು (ಸೋಽಹಂ). ವ್ಯಕ್ತಿ ಸ್ವಯಂ ಶಿವನಾದರೂ ಸಾಲದು. ಅವನು 'ಸರ್ವಂ ಖಲ್ವಿದಂ ಬ್ರಹ್ಮ' ಎನ್ನುವ ಮಹಾತತ್ತ್ವವನ್ನು ಅನುಷ್ಠಾನಕ್ಕೆ ತರಬೇಕು. ಬ್ರಹ್ಮಸ್ವರೂಪಿಯಾದ ವ್ಯಕ್ತಿ ಅಖಂಡ ಬ್ರಹ್ಮ ಸ್ವರೂಪವಾದ ವಿಶ್ವದ ಪ್ರತೀಕವಾಗಬೇಕು. ಭಾರತದ ಈ ದಿವ್ಯದೃಷ್ಟಿ ಯಿಂದಲೇ ಜಗತ್ತಿನ ಕಲ್ಯಾಣವಾಗಬೇಕು.

ಪ್ರಾಗತಿಕ ಮನೋಭಾವವುಳ್ಳ ಭಾರತೀಯ, ಸಾಹಿತ್ಯಪ್ರಗತಿಯನ್ನೂ ಭಾರತೀಯತೆಯನ್ನೂ ಕೂಡಿಸಿ ಸಾಧಿಸಬೇಕು. ಉಪನಿಷತ್ತಿನ ಮಹೋನ್ನತ ಸಂಸ್ಕೃತಿಯಲ್ಲಿ ಬೆಳೆದಿರುವ ವಿಶ್ವತೋಮುಖವಾದ ಭಾರತ ಇಂದಿನ ಜಗತ್ತಿನ ಸಮಸ್ಯೆಗಳಿಗೆ ಪರಿಹಾರವನ್ನೊದಗಿಸಲಾರದೇ ಎಂದು ಯೋಚಿಸಬೇಕಾದ ಕರ್ತವ್ಯ ನಮ್ಮದಾಗಿದೆ.

---

# ೪. ಶ್ರಮಜೀವಿ ಮತ್ತು ಸಾಹಿತ್ಯ

ಶ್ರಮಜೀವಿಗೆ ಸಾಹಿತ್ಯ ಬೇಕೆ ?

ಹೊಟ್ಟೆ ಬಟ್ಟೆಯ ಪ್ರಶ್ನೆ ಪ್ರಧಾನವಾಗಿರುವಾಗ ಸಾಹಿತ್ಯವನ್ನು ರೂಢಿಸಿಕೊಂಡು, ಅದರಲ್ಲಿ ದೊರೆಯುವ ನಿರ್ಮಲಾನಂದವನ್ನು ಶ್ರಮಜೀವಿ ಅನುಭವಿಸಲು ಸಾಧ್ಯವೇ ?

ಈ ಪ್ರಶ್ನೆಗಳನ್ನಿಂದು ವಿಚಾರಪರರು ಕೇಳುತ್ತಿದ್ದಾರೆ. ಶ್ರಮಜೀವಿಗೆ ಸಾಹಿತ್ಯಬೇಕೇ ಎಂದು ವಿಚಾರಮಾಡುವ ಮುನ್ನ ಸಾಹಿತ್ಯವೆಂದರೇನು ಎಂದು ತಿಳಿದುಕೊಳ್ಳಬೇಕಾದುದಗತ್ಯ.

ಪಂಡಿತರು, ವಿವಿಧ ಕಳಾಮಂಡಿತರು ಓದತಕ್ಕ ಕೃತಿಗಳೇ ಒಂದು ಕಾಲದಲ್ಲಿ ಸಾಹಿತ್ಯ ಎಂದೆನಿಸಿಕೊಂಡಿದ್ದುವು. ಸಾಮಾನ್ಯಜನಕ್ಕೆ ಅರ್ಥ ವಾಗುವ ಹಾಗೆ ಬರದಲ್ಲಿ ಅದು ಸಾಹಿತ್ಯದ ಪಂಕ್ತಿಗೇ ಸೇರದಿದ್ದ ಕಾಲವದು. ಕನ್ನಡದ ಉಚ್ಚಸಾಹಿತ್ಯಶ್ರೇಣಿಗೆ ಶಿವಶರಣರ ವಚನಗಳು, ಹರಿದಾಸರ ಕೀರ್ತನೆಗಳು, ಸರ್ವಜ್ಞನ ತ್ರಿಪದಿಗಳನ್ನು ಲಾಕ್ಷಣಿಕರು ಸೇರಿಸುತ್ತಿರಲಿಲ್ಲ. ಕಾವ್ಯದ ನಾಯಕ ನಾಯಕಿಯರು ರಾಜವರ್ಗದವರೋ, ಶ್ರೀಮಂತರೋ ಆಗಿರಬೇಕು ; ಕಾವ್ಯದಲ್ಲಿ ಅಷ್ಟಾದಶ ವರ್ಣನೆಗಳಿರಬೇಕು ; ಭಾಷೆ ಪ್ರೌಢವಾಗಿ ಪಂಡಿತರಂಜಕವಾಗಿರಬೇಕು—ಎಂಬ ಮೂರು ಪ್ರಸ್ಥಾನಗಳನ್ನು ಪ್ರಾಚೀನ ಮಹಾಕಾವ್ಯಪರಂಪರೆ ಅನುಸರಿಸಿತೆಂದು ಸ್ಥೂಲವಾಗಿ ಹೇಳ ಬಹುದು.

ಈ ಮನೋಭಾವದಿಂದ ವಿದ್ಯೆ ಕೆಲವರ ಸೊತ್ತಾಯಿತು. ಅದು ಅರಮನೆ ಗುರುಮನೆಗಳನ್ನು ಬಿಟ್ಟು ಹೊರಗೆ ಬರಲಿಲ್ಲ. ಸಹಸ್ರಾರು ದೀಪಗಳಿಂದ ವಿರಾಜಮಾನವಾಗಿದ್ದ ಅರಮನೆಯಲ್ಲಿ ಕವಿ ತನ್ನ ಕಾವ್ಯ ದೀಪವನ್ನು ಹಚ್ಚಿಡಲು ಪ್ರಯತ್ನಿಸುತ್ತಿದ್ದನೇ ವಿನಾ ಅಜ್ಞಾನಾಂಧಕಾರದಲ್ಲಿ ಮುಳುಗಿದ್ದ ಬಡವನ ಗುಡಿಸಿಲಿನಲ್ಲಿ ಹಣತೆ ಹಚ್ಚಿಡಲು ಪ್ರಯತ್ನಿಸಲಿಲ್ಲ.

ಕವಿಗಳ ಸಂಕುಚಿತ ಭಾವನೆಯಿಂದ ಜನಪದದಲ್ಲಿ ಅಜ್ಞಾನ ಅಭಿವೃದ್ಧಿಯಾಯಿತು.

ಪಂಡಿತರಿಗೆ, ವಿವಿಧ ಕಳಾಮಂಡಿತರಿಗೆ ಸಾಹಿತ್ಯ ಹೇಗೆ ಬೇಕೋ ಹಾಗೆ ಸಾಮಾನ್ಯ ಶ್ರಮಜೀವಿಗೆ ಬೇಡವೇ ? ಕಾವ್ಯದ ಉದ್ದೇಶವೆಲ್ಲಾ ವೈಯಕ್ತಿಕವಾಗಿದ್ದು, ಅದು ಕವಿಯ ಮಹೋನ್ನತಿಯನ್ನು ಸಾರುವ ಸಾಧನವಾದಲ್ಲಿ ಶ್ರಮಜೀವಿಗೆ ಅಂಥ ಸಾಹಿತ್ಯದಿಂದ ಏನೂ ಪ್ರಯೋಜನವಿಲ್ಲ. ಆದರೆ ಸಾಹಿತ್ಯದ ಉದ್ದೇಶ ವೈಯಕ್ತಿಕವಾದುದಲ್ಲ ; ಸಾಮೂಹಿಕವಾದುದು. ಸೂರ್ಯಪ್ರಭೆಯಲ್ಲಿ ಸುಪ್ತವಾಗಿರುವ ಕ್ಷ-ಕಿರಣ ಮಾನವನ ನರ ನಾಡಿಗಳಲ್ಲಿಯೂ ನವಚೇತನ ತುಂಬಬಲ್ಲುದು. ಸೂರ್ಯಪ್ರಭೆಯಮೇಲೆ ರಾಜ, ಶ್ರೀಮಂತ, ಮಠಾಧಿಪತಿ ಸ್ವಾಮ್ಯ ಸ್ಥಾಪಿಸಲು ಸಾಧ್ಯವಿಲ್ಲ.

ನಿತ್ಯದ ಹೋರಾಟ ಯಾರಿಗಿಲ್ಲವೋ ಅವರು ಮಾತ್ರ ಸಾಹಿತ್ಯದ ಸವಿಕಾಣಲು ಸಾಧ್ಯ ಎಂಬ ತಪ್ಪುಕಲ್ಪನೆ ಹಬ್ಬಿದೆ. ಇದರಿಂದ ಸಾಹಿತ್ಯದ ಸ್ಥಾನ ಗೌಣವೆಂದು ಒಪ್ಪಿಕೊಂಡಂತಾಯಿತು.

ಸಾಹಿತ್ಯ ನಿತ್ಯಜೀವನಕ್ಕೆ ಅವಶ್ಯಕವಾದ ಸಾಮುಗ್ರಿಗಳನ್ನೊದಗಿಸಬಲ್ಲುದೇ—ಹಸಿದವರಿಗೆ ಅನ್ನವನ್ನು, ನಗ್ನರಾಗಿರುವವರಿಗೆ ವಸ್ತ್ರವನ್ನು ಒದಗಿಸುತ್ತದೆಯೇ ? ಖಂಡಿತವಾಗಿಯೂ ಇಲ್ಲ. ಪ್ರಯೋಜನಾರ್ಥಕ ದೃಷ್ಟಿಯಿಂದ ನೋಡುವುದಾದರೆ ಸಾಹಿತ್ಯದಿಂದ ಏನೂ ಪ್ರಯೋಜನವಿಲ್ಲ. ಆದರೆ ಮನುಷ್ಯ ಕೇವಲ ಆಹಾರ, ನಿದ್ರಾ, ಭಯ, ಮೈಥುನಗಳಲ್ಲಿಯೇ ಬದುಕುತ್ತಾನೆಯೇ ? ಅವನ ಜೀವನಕ್ಕೆ ಅಂತಃಕರಣಚತುಷ್ಟಯ ಎಷ್ಟು ಮುಖ್ಯವೋ ಅದಕ್ಕೂ ಮುಖ್ಯ ಚತುರ್ವಿಧ ಪುರುಷಾರ್ಥ. ಅವನ ದೇಹಕ್ಕ ಅನ್ನಬೇಕು – ಬಟ್ಟೆ ಬೇಕು : ಹಾಗೇ ಮನಸ್ಸಿಗೆ ಆನಂದಬೇಕು, ಶಾಂತಿಬೇಕು. ಮನುಷ್ಯ ತನ್ನ ಅನ್ನವನ್ನು ತಾನು ದೊರಕಿಸಿಕೊಳ್ಳಬೇಕು — ಅದಕ್ಕಾಗಿ ದುಡಿಯಬೇಕು. ಆದರೆ ದುಡಿಮೆಗೆ ಕ್ರತುಶಕ್ತಿ (Impetus) ಬೇಕು. ಸಾಹಿತ್ಯ ಅನ್ನವನ್ನು ಕೊಡಲಾರದು.—ಆದರೆ ಅನ್ನವನ್ನೊದಗಿಸುವ ಕ್ರತುಶಕ್ತಿಯನ್ನು ನೀಡಬಲ್ಲದು.

ಅನ್ನವಿರುವವರಿಗಿಂತಲೂ ಇಲ್ಲದವರಿಗೇ ಈ ಕ್ರತುಶಕ್ತಿಯ ಆವಶ್ಯಕತೆ ಹೆಚ್ಚೆನ್ನುವುದು ಸ್ವತಃಸಿದ್ಧ. ತನ್ನ ನಿತ್ಯದ ಬಾಳುವೆಗೆ ದೇಹ ಶೋಷಿಸುವ

ಶ್ರಮಜೀವಿಗೆ ಚೈತನ್ಯವನ್ನು, ನಿರ್ಮಲಾನಂದವನ್ನು, ಬದುಕಿನ ಆಸೆಯನ್ನು ಸಾಹಿತ್ಯ ಹುಟ್ಟಿಸಬಲ್ಲುದು.

ಈ ವಿಷಯದಲ್ಲಿ ಶ್ರಮಜೀವಿಯ ಜವಾಬ್ದಾರಿಗಿಂತಲೂ ಸಾಹಿತಿಯ ಜವಾಬ್ದಾರಿ ಹೆಚ್ಚು. ತಾನಿದ್ದಲ್ಲಿ ಜ್ಞಾನಭಿಕ್ಷುಕ ಬರಬೇಕೆಂದು ಸಾಹಿತಿ ಕೈಕಟ್ಟಿ ಕೂಡುವಕಾಲ ಕಳೆದು ಹೋಯಿತು. ಸಾಹಿತಿ ಜ್ಞಾನದ ಪಂಜನ್ನು ಹಚ್ಚಿಕೊಂಡು ಮನೆಮನೆಗೂ ಹೋಗಬೇಕು. ಅವನ ಕೃತಿ, ತಪಸ್ಸು, ಆನಂದ ಪ್ರತಿ ಮನೆ, ಮನವನ್ನೂ ಹೊಗಬೇಕು. ಪ್ರತಿಯೊಂದು ಜೀವಿಯಲ್ಲಿಯೂ ಈಶ್ವರನಿದ್ದಾನೆಂದು ನಂಬುವ ಸಾಹಿತಿ ಆ ಬೃಹದೀಶ್ವರನ ಸೇವೆಯನ್ನು ತ್ರಿಕರಣಪೂರ್ವಕವಾಗಿ ಮಾಡಬೇಕು. - ಸರ್ವಾತ್ಮಕ್ಕೆ ಮಣಿಯುವ ಶಿರವೇ ಮುಗಿಲೆತ್ತರಕ್ಕೆ ನಿಲ್ಲುವ ಶಿರ. ಸರ್ವಾತ್ಮನಲ್ಲಿ ಏಕತ್ವವನ್ನು ಕಾಣುವ ಕವಿಯೇ ದೃಷ್ಟಾರ — ಅವನನ್ನೇ ಋಷಿಯೆಂದು ಹಿರಿಯರು ಕರೆದುದು.

ಶ್ರಮಜೀವಿಗೆ ಸಾಹಿತ್ಯಬೇಕೇ ಎಂದು ಕೇಳುವವರಿಗೆ ನನ್ನದೊಂದು ಉತ್ತರ - ಅವರಿಗಲ್ಲದೆ ಇನ್ನು ಯಾರಿಗೆ ಬೇಕು ?

---

# ೫. ಭಾರತಶಕ್ತಿ

ರಾಜಾ ರಾಮಮೋಹನರಾಯರ ಕಾಲದಲ್ಲಾದ ಭಾರತದ ನವೋದಯಕ್ಕೆ (Renaissance) ಒಂದು ವಿಚಿತ್ರ ಪ್ರತಿಕ್ರಿಯೆ ಹುಟ್ಟಿತು. ಇಂಗ್ಲೀಷ್‌ಭಾಷೆ ಮಿಲ್, ಬರ್ಕ್, ಮಾರ್ಕ್ಸ್, ಬ್ರಾಡ್‌ಲಾ, ಇಂಗರ್ಸಾಲ್ ಇವರ ನೂತನ ವಿಚಾರಧಾರೆಯ ಪರಿಚಯ ಭಾರತೀಯರಿಗೆ ಮಾಡಿಕೊಟ್ಟು ಅವರ ಬುದ್ಧಿಶಕ್ತಿಯ ಪ್ರಚೋದನಕ್ಕೆ ನೆರವಾದುದರ ಜತೆಗೆ ಭಾರತೀಯವೆನ್ನುವುದೆಲ್ಲವನ್ನೂ ಅಲ್ಲಗಳೆಯುವ 'ಚಿತ್ತದಾಸ್ಯ'ವನ್ನೂ ತಂದುಕೊಟ್ಟಿತು. ಇಂಗ್ಲೀಷ್ ಶಿಕ್ಷಣ ಪಡೆದವರು ಭಾರತೀಯ ಸಾಹಿತ್ಯ, ಕಲೆ, ಅಧ್ಯಾತ್ಮಗಳನ್ನು ತೆಗಳಲಾರಂಭಿಸಿದರು. ಇದೇ ಸಮಯದಲ್ಲಿ ಕ್ರೈಸ್ತಮತ ಪ್ರಚಾರಿಣೀ ಸಂಸ್ಥೆಗಳವರು ತಮ್ಮ ಮತಾಂತರ ಕಾರ್ಯವನ್ನು ಹುರುಪಿನಿಂದ ಸಾಗಿಸಿದರು.

ಭಾರತೀಯರಲ್ಲಿ ತಲೆದೋರಿದ್ದ ಈ 'ನೂತನ ಅವನತಿ'ಯನ್ನು ಕಂಡು ಅವರ ಉದ್ಧಾರಕ್ಕೆ ಟೊಂಕಕಟ್ಟಿ ನಿಂತವರು ಸ್ವಾಮಿ ವಿವೇಕಾನಂದರು. ವಿಚಾರವಾದಿಗಳು, ಜ್ಞೇಯವಾದಿಗಳು, ಹೈತುಕವಾದಿಗಳು ಎಲ್ಲರ ದೃಷ್ಟಿಪಥವನ್ನು ಭಾರತೀಯ ದರ್ಶನಗಳು ಅನುಲಕ್ಷಿಸಿವೆಯೆಂಬುದನ್ನೂ ವೇದಾಂತಧರ್ಮದ ವಿಶ್ವವ್ಯಾಪ್ತಿಯನ್ನೂ ತೋರಿಸಿಕೊಟ್ಟರು. ಆಧ್ಯಾತ್ಮಿಕ ರಂಗದಲ್ಲಿ ಸ್ವಾಮಿ ವಿವೇಕಾನಂದರು ಮಾಡಿದ ಸೇವೆಗಿಂತಲೂ ಮಹತ್ತ್ವವಾದುದು ಭಾರತೀಯರಿಗೆ ಅವರು 'ಸ್ವಸ್ವರೂಪದರ್ಶನ' ಮಾಡಿಸಿದಕೆಲಸ. ವಿವೇಕಾನಂದರು ಹಾಕಿದ ಅಸ್ಥಿಭಾರದ ಮೇಲೆ ಕಾಂಗ್ರೆಸ್‌ಸಂಸ್ಥೆ ಜನ್ಮತಾಳಿ ಭಾರತ ಸ್ವಾತಂತ್ರ್ಯಕ್ಕೆ ಮುಡಿಯಿತೆನ್ನುವುದು ಗಮನಾರ್ಹವಾದ ಸಂಗತಿ.

ಇಂದು ಭಾರತೀಯರ ಮನಸ್ಸಿನಲ್ಲಿ ಎರಡು ವಿಚಾರಪಂಥಗಳ ಸಂಗ್ರಾಮ ನಡೆಯುತ್ತಿದೆ. ಭಾರತದ ಪ್ರಾಚೀನ ಪರಂಪರೆಯ ನೆರವು ಪಡೆದು ಭಾರತವನ್ನು ಆ ಅಚ್ಚಿನಲ್ಲಿ ರೂಪಿಸೋಣವೋ–ಭಾರತದ ಪರಂಪರೆಯನ್ನು ಸಂಪೂರ್ಣವಾಗಿ ಕಡೆಗಾಣಿಸಿ ಪಾಶ್ಚಾತ್ಯ ಪದ್ಧತಿಯಲ್ಲಿ ನಮ್ಮ ರಾಜಕಾರಣ, ಸಂಸ್ಕೃತಿ, ಶಿಕ್ಷಣಗಳನ್ನು ಅಳವಡಿಸಿಕೊಳ್ಳೋಣವೋ? ಪ್ರಾಚ್ಯ ಸಂಸ್ಕೃತಿಯನ್ನು

ಸಂಪೂರ್ಣವಾಗಿ ಕೈಬಿಟ್ಟು ಪಾಶ್ಚಾತ್ಯರ ಅಂಧಾನುಕರಣಮಾಡಿದ ಜಪಾನ್ ಸಾಮ್ರಾಜ್ಯಕ್ಕೆ ಒದಗಿದ ವಿಪತ್ತು ನಮ್ಮ ಕಣ್ಣು ಮುಂದೆ ಕಟ್ಟಿದೆ. ಹದಿನಾರಾಣೆಯ ಭಾಗ ಪಾಶ್ಚಾತ್ಯರ ಅನುಕರಣೆಗೆ ಹೊರಟ ತುರ್ಕಿ, ಅಫ್ಘಾನಿಸ್ಥಾನ ತೊಳಲಾಡುತ್ತಿರುವುದನ್ನು ನಾವೇ ಕಣ್ಣಾರೆ ನೋಡುತ್ತಿದ್ದೇವೆ. ಭಾರತವೂ ಜಪಾನಿನ ಪ್ರತೀಕವಾಗಬೇಕೇ ಎನ್ನುವ ಸಮಸ್ಯೆ ನಮ್ಮ ಮುಂದೆ ನಿಂತಿದೆ.

ಇಂಗ್ಲೆಂಡ್, ಅಮೇರಿಕೆಗಳಲ್ಲಿ ಹಲವು ವರ್ಷ ಇದ್ದುಬರುವ ಭಾರತೀಯರು, ಮಿಸ್‌ಮೇಯೋ, ಬೆವರ್ಲಿ ನಿಕ್ಲಾಸ್, ಅಬೆ ಡೂಬ್ವಾಗೋತ್ರದ ಇಂಗ್ಲೀಷಿನವರು, ಅಮೇರಿಕನ್ನರು ನಮಗೊಂದು ಸವಾಲು ಹಾಕಿದ್ದಾರೆ. 'ಅಧ್ಯಾತ್ಮ, ಅಧ್ಯಾತ್ಮವೆಂದು ಹೇಳುವಿರಲ್ಲಾ, ನಿಮ್ಮ ಅಧ್ಯಾತ್ಮದಿಂದ ಯಾರಿಗೇನು ಪ್ರಯೋಜನವಾಯಿತು ? ಅದರಿಂದ ನಿಮ್ಮ ಜನರ. ಹಸಿವು ಹಿಂಗಿತೇ ? ಜೀವನದ ಮಟ್ಟ ಏರಿತೇ ? ನಿಮ್ಮ ಅಧ್ಯಾತ್ಮಜ್ಞಾನದಿಂದ ನಿಮ್ಮ ದೇಶ ಬಲಯುತವಾಯಿತೇ ?' ಅಧ್ಯಾತ್ಮ, ರಾಜಕಾರಣಗಳನ್ನು ಒಂದೇ ಮಾನದಂಡದಿಂದ ಅಳೆಯುವವರಿಗೆ, ಹೇಗಾದರೂ ಎಂತಾದರೂ ಸುಖವಾಗಿರಬೇಕೆಂದು ಬಯಸುವವರಿಗೆ ಭಾರತದ ಅಧ್ಯಾತ್ಮದಿಂದ ಪ್ರಯೋಜನವಿಲ್ಲ. ಅದೇ ವಿಮರ್ಶಕರಿಗೆ ನಾವೂ ಒಂದು ಸವಾಲು ಹಾಕೋಣ. 'ಪ್ರಾಪಂಚಿಕ ಸುಖಸಾಧನೆಯ ಹಲವು ಉಪಾಯಗಳನ್ನು ನೀವು ಕಂಡುಹಿಡಿದಿರಿ. ಮೋಟಾರು, ರೇಡಿಯೋ, ಟೆಲಿವಿಸನ್, ಜೆಟ್ ಪ್ಲೇನ್ ಜಗತ್ತನ್ನೇ ನಿಮ್ಮ ಮನೆಯ ಬಾಗಿಲಿಗೆ ತಂದಿದೆ. ನೀವು ಬೇಕಾದಷ್ಟು ತಿನ್ನುವಿರಿ, ಸಾಕಾಗುವಷ್ಟು ಕುಡಿಯುವಿರಿ, ಲೈಂಗಿಕ ವಿಭೇದವನ್ನು ಕೂಡ ತೊಡೆದುಹಾಕಿರುವಿರಿ. ಈ ಜೀವನದಿಂದ ನಿಮಗೆ ಶಾಂತಿ, ಸುಖ ಲಭಿಸಿದೆಯೇ ? ಅಮೇರಿಕೆಯನ್ನು ಇಂದು ಆಳುತ್ತಿರುವವರು ಯಾರು ? ಕು ಕ್ಲಕ್ಸ್ ಕ್ಲ್ಯಾನ್ಸ್ ಜನ, ಡೆಲಿಂಗರ್, ಆಲ್ ಕೆಪಾನ್ ಅವರ ಶಿಷ್ಯರು, ಕೆಲವು ಜನ ಬಂಡವಾಳಶಾಹಿಗಳು. ನಿಮ್ಮ ಜೀವನ ಮನುಷ್ಯ ಜೀವನವಾಗಿದೆಯೇ ? ನೀಗ್ರೋ ಜನರನ್ನು ಇಂದಿಗೂ ನೀವು ಹೇಗೆ ನಡೆಸಿಕೊಳ್ಳುತ್ತಿರುವಿರಿ ? ಅಟಂಬಾಂಬನ್ನು ಕೈಯಲ್ಲಿ ಹಿಡಿದು ರಾಕ್ಷಸರಂತೆ ಇಡಿಯ ಜಗತ್ತನ್ನು ನೀವು ಬೆದರಿಸುತ್ತಿಲ್ಲವೇ—ಇಡಿಯ ಜಗತ್ತನ್ನೇ ದಾಸ್ಯಪಂಕದಲ್ಲಿ ಕೆಡವಬೇಕೆಂದು ನೀವು ಹವಣಿಸುತ್ತಿಲ್ಲವೆ ?' ಪಾಶ್ಚಾತ್ಯರ ಅನುಕರಣದಿಂದ ನಮ್ಮ ಜೀವನವೂ ಅಮೇರಿಕನ್ನರ ಜೀವನದಂತೆ

ರೂಪುಗೊಳ್ಳುವುದಾದರೆ ನಮಗೆ ಅಂಥ ನಾಗರಿಕತೆಯ ಅವಶ್ಯಕವಿಲ್ಲ. ಸಹಸ್ರಾರು ಜನರ ಗೋರಿಗಳಮೇಲೆ ಕಿನಕಾಪ್ ಸುಪ್ಪತ್ತಿಗೆ ಹಾಸಿಕೊಂಡು ಮಲಗಬೇಕೆಂಬ ಬಯಕೆ ಭಾರತಕ್ಕೆ ಬರಬೇಕಾಗಿಲ್ಲ. ಅಂಥ ರಕ್ತರಂಜಿತ ಸುಖ ಪಾಶ್ಚಾತ್ಯ ದೇಶಗಳಿಗೇ ಮೀಸಲಾಗಿರಲಿ.

ಪಾಶ್ಚಾತ್ಯರೂ, ಅವರ ಬಾಲಬಡಿಯುವ ಭಾರತೀಯರೂ ನಂಬಿರುವಂತೆ ಭಾರತ ಕೆಟ್ಟುದು ಅದರ ಆಧ್ಯಾತ್ಮದಿಂದಲ್ಲ; ಅಧ್ಯಾತ್ಮದ ವಿಸ್ಮೃತಿಯಿಂದ. ಭಾರತೀಯರ ಧರ್ಮವಾದ ವೇದಾಂತ ದುರ್ಬಲರ ಧರ್ಮವಲ್ಲ. 'ನಾಯ ಮಾತ್ಮಾ ಬಲಹೀನೇನ ಲಭ್ಯಃ' ಎಂದು ಉಪನಿಷತ್ತುಗಳು ಸಾರಿ ಹೇಳಿದುವು. ಧರ್ಮರಕ್ಷಣೆಗೆ ಯುದ್ಧ ಮಾಡಬೇಕಾದಲ್ಲಿ ಮಾಡಲೇಬೇಕು ಎಂದು ಗೀತೆ ಬೋಧಿಸಿತು. ಭಾರತಧರ್ಮದ ಗಂಡುಗಲಿತನವನ್ನು ಮರೆತು ನಾವು ನಮ್ಮ ಪತನವನ್ನು ತಂದುಕೊಂಡೆವು. ತನ್ನ ಶಕ್ತಿಮತ್ತತೆಯನ್ನು ಇತರರ ಮೇಲೆ, ದುರ್ಬಲರ ಮೇಲೆ, ಪ್ರಯೋಗಿಸುವ ರಾಕ್ಷಸೀವೃತ್ತಿಯನ್ನು ಭಾರತ ಎಂದೂ ಅನುಮೋದಿಸಲಿಲ್ಲ, ಅವಲಂಬಿಸಲಿಲ್ಲ. ಹಸಿದ ಭಾರತಕ್ಕೆ ಕೂಳುಕೊಡುವ ನೆಪದಿಂದ ಅದನ್ನು ಚಿರಂತನದಾಸ್ಯದಲ್ಲಿ ಕೆಡವಬೇಕೆಂಬ ಹಂಚಿಕೆಯನ್ನು ಅಮೇರಿಕಾ ಹಾಕಿದಂತೆ ಭಾರತ ಎಂದೂ ಹಾಕಲಿಲ್ಲ. ಭಾರತ ನಂಬಿರುವ ಬೀಜವಾಕ್ಯ – ಸಮಸ್ತ ಸನ್ಮಂಗಳಾನಿಭವಂತು – ಲೋಕಸ್ಸಮಸ್ತಾ ಸುಖಿನೋ ಭವಂತು.

ಪಾಶ್ಚಾತ್ಯರ ವೈಜ್ಞಾನಿಕ ಪ್ರಗತಿ, ಅವರ ಪ್ರಾಪಂಚಿಕ ಮುನ್ನಡೆ ತನ್ನ ಕೊನೆಯ ಘಟ್ಟಕ್ಕೆ ಬಂದಿದೆ. ಜಗತ್ತನ್ನೇ ನಾಶಮಾಡಬಲ್ಲ ಆಟಂ ಬಾಂಬ್, ಹೈಡ್ರೋಜನ್ ಬಾಂಬ್‌ಗಳ ಸಂಶೋಧನೆಯೊಂದಿಗೆ ಅವರು ತಮ್ಮ ಶಕ್ತಿಮತ್ತತೆಯ 'ಭರತವಾಕ್ಯ' ಹೇಳಿದ್ದಾರೆ. ಇನ್ನುಳಿದಿರುವುದು ಅವರ ಕೈಯಲ್ಲಿರುವ ನಾಶಕಾರಕ ಆಯುಧಗಳ ಪ್ರಯೋಗ! ಪಾಶ್ಚಾತ್ಯ ವೈಜ್ಞಾನಿಕ ಪ್ರಗತಿಯನ್ನು ಕುರಿತು ಪ್ರಸ್ತಾಪಿಸುತ್ತಾ 'ಕಪಿ ಕೈಗೆ ಗಡಿಯಾರ ಕೊಟ್ಟ ಹಾಗಾಗಿದೆ' ಎಂದಿದ್ದಾರೆ ಸಿ. ಇ. ಎಮ್. ಜೋಡ್. ವಿಶ್ವವಿಖ್ಯಾತ ವೈಜ್ಞಾನಿಕರಾದ ಡಾ. ಅಲೆಕ್ಸಿಸ್ ಕ್ಯಾರೆಲ್ ಅವರು ಪಾಶ್ಚಾತ್ಯ ನಾಗರಿಕತೆ, ವೈಜ್ಞಾನಿಕ ಮನೋಭಾವ ಮನುಷ್ಯತ್ವವನ್ನು ನಾಶಮಾಡಿದೆ ಎಂದು

ಅಭಿಪ್ರಾಯಪಟ್ಟಿದ್ದಾರೆ.* ಸಾಮರ್‌ಸೆಟ್ ಮಾಮ್, ಟಿ. ಎಸ್. ಈಲಿಯಟ್, ಕ್ರಿಸ್ಟೋಫರ್ ಈಷರ್‌ವುಡ್, ಪರ್ಲ್ ಬಕ್, ರೊಮೆ ರೋಲಾ, ಆಲ್‌ಡ್ಯುಅಸ್ ಹಕ್ಸ್‌ಲೀ, ಜೆರಾಲ್ಡ್ ಹರ್ಡ್, ಜೋಡ್, ರಸಲ್ ಮೊದಲಾದ ಸಾಹಿತಿಗಳು, ದಾರ್ಶನಿಕರು ಪಾಶ್ಚಾತ್ಯ ಸಂಸ್ಕೃತಿಯ ವಿನಾಶಕಾರಕಮುಖವನ್ನು ಕಂಡು ಬೇಸತ್ತು ಭಾರತ ಸಂಸ್ಕೃತಿಯ ಕ್ರಿಯಾಮುಖದತ್ತ ಧಾವಿಸಿದ್ದಾರೆ. ಪಾಶ್ಚಾತ್ಯ ಸಂಸ್ಕೃತಿಯ ಸೌಧ ಇಂದು ಕುಸಿದುಬೀಳುತ್ತಿದೆ. ಈ ಸ್ಮಶಾನದಲ್ಲಿ ಹೂದೋಟ ಬೆಳಸಬೇಕೆಂದು ಭಾರತೀಯರು ಹಂಬಲಿಸಬೇಕೆ? ಲೋಕವನ್ನು ಉಳಿಸಿ, ಉದ್ಧರಿಸಬಲ್ಲ ಭಾರತೀಯ ಸಂಸ್ಕೃತಿಗೆ ತಿಲತರ್ಪಣವನ್ನಿತ್ತು ವಿನಾಶದ ದೂತರಾಗಬೇಕೆಂದು ಹಳಹಳಿಸಬೇಕೇ?

---

* Moral sense is almost completely ignored by modern society. We have, in fact, supressed its manifestations. All are imbued with irresponsibillity. Those who discern good and evil, who are industrious and provident, remain poor and are looked upon as morons. The woman who has several children, who devotes herself to their education, instead of to her own career, is considered weak minded. If a man saves a little money for his wife and the education of his children, this money is stolen from him by enterprising financiers, or taken by the Government and distributed to those who have been reduced to want by their own improvidence and the short-sightedness of manufacturers, bankers and economists. Artists and men of science supply the community with beauty, health and wealth. They live and die in poverty. Robbers enjoy prosperity in peace. Gangsters ars protected by politicians and respected by judges. They are the heroes whom children admire at the cinema and imitate in their games. A rich man has every right. He may discard his ageing wife, abondon his old mother to penury, rob

ಭಾರತ ಸಂಸ್ಕೃತಿಯ ಪ್ರತೀಕವಾಗಿ ಅದರ ಅಧ್ಯಾತ್ಮ ನಿಂತಿರುವಂತೆ, ಅದರ ಸಾಹಿತ್ಯ, ಕಲೆಗಳೂ ನಿಂತಿವೆ. ಕವಿಕುಲಗುರು ವಾಲ್ಮೀಕಿ ತನ್ನ ಅಮರಕೃತಿಯಲ್ಲಿ ರಾಮ, ಭರತ, ಹನುಮಂತ, ಸೀತೆ, ಶಬರಿ ಮೊದಲಾದ ಸೀಮಾಪುರುಷರ, ಸ್ತ್ರೀಯರ ಆದರ್ಶವನ್ನು ಕಡೆದಿಟ್ಟಿದ್ದಾನೆ. ಆಸೇತುಹಿಮಾಚಲ ಪರ್ಯಂತವಾದ ಮಹಾರಾಜ್ಯವನ್ನು ಕೈಯಲ್ಲಿ ಹಿಡಿದ ಭರತ ಅಣ್ಣನ ಬಳಿಗೆ ಅರಣ್ಯಕ್ಕೆ ಓಡುತ್ತಾನೆ. 'ಈ ರಾಜ್ಯ ನನಗೆ ಬೇಡ, ನಾನು ಚಿಕ್ಕವನು, ಇದು ನಿನ್ನದು, ತಾಯಿ ಮಾಡಿದ ಅವಿವೇಕ ಮರೆತು ಅಯೋಧ್ಯೆಗೆ ಹಿಂದಿರುಗಿ ನಿನ್ನ ರಾಜ್ಯವನ್ನು ಒಪ್ಪಿಸಿಕೋ' ಎನ್ನುತ್ತಾನೆ. ರಾಮಚಂದ್ರ ತಮ್ಮನನ್ನಪ್ಪಿ ಅವನನ್ನು ಮುಂಡಾಡಿ 'ತಂದೆಯ ವಾಕ್ಯ ಪಾಲಿಸುವುದು ನಮ್ಮಿಬ್ಬರ ಕರ್ತವ್ಯ. ಅಯೋಧ್ಯೆಗೆ ನಾನು ಅರಸಾದರೇನು–

---

those who have entrusted their money to him, without losing the consideration of his friends. Homosexuality flourishes. Sexual morals have been cast aside. psycho - analysis supervise men and women in their conjugal relations. There is no difference between wrong and right, just and unjust. Criminals thrive at liberty among the rest of the population. No one makes any objection to their presence. Ministers have rationlized religion. They have destroyed its mystical basis. But they do not succeed in attracting modern men. In their half—empty churches they vainly preach a weak morality. They are content with the part of policemen, helping in the interest of the wealthy to preserve the framework of present society. Or, like politicians, they flatter the appetites of the crowd."

Dr. Alexis Carrel
"MAN, THE UNKNOWN" (Page 146)

ನೀನು ಅರಸಾದರೇನು. ನನ್ನ ಹಾಗೆ ನೀನೂ ದಾಶರಥಿ. ನೀನು ಧರ್ಮಿಷ್ಟ, ಹೋಗಿ ರಾಜ್ಯವನ್ನು ಸಂತೋಷವಾಗಿ ಆಳು' ಎನ್ನುತ್ತಾನೆ. ತ್ಯಾಗಮೂರ್ತಿಗಳಾದ ಈ ಅಣ್ಣತಮ್ಮಂದಿರು ರಾಜ್ಯ ತಮಗೆ ಬೇಡವೆಂದು ಕಲಹವಾಡುತ್ತಾರೆ. ಸಮಸ್ತ ಸಂಪತ್ತು ಭೋಗವನ್ನು ಕೈಯಲ್ಲಿ ಇಟ್ಟುಕೊಂಡು ಅದು ನನಗೆ ಬೇಡ ಎನ್ನುವ ವೀರ ವೈರಾಗ್ಯವನ್ನು ಭಾರತವಲ್ಲಿ ಅಲ್ಲದೆ ಬೇರೆಲ್ಲಿ ಕಾಣೋಣ. ಮಹರ್ಷಿ ವ್ಯಾಸರು ಜಗತ್ತು ಇಂದಿಗೂ ನಿಬ್ಬೆರಗಾಗುವ 'ಮಹಾಭಾರತ' ಸಂಪತ್ತನ್ನು ನಮ್ಮ ಕೈಯಲ್ಲಿಟ್ಟಿದ್ದಾರೆ. ಸಾಹಿತ್ಯವೇ, ಧರ್ಮವೇ, ರಾಜಕಾರಣವೇ, ಸಮಾಜ ರಚನೆಯೇ ಏನು ಬೇಕು ಎಲ್ಲವನ್ನೂ ಭಾರತದಲ್ಲಿ ಕ್ರೋಢೀಕರಿಸಿದ್ದಾರೆ ಈ ಅನ್ಯಾದೃಶ ಮೇಧಾವಿ. ಭಾರತ ರಣರಂಗದಲ್ಲಿ ಗಾಂಗೇಯ ಮೃತ್ಯುಸ್ವರೂಪನಾಗಿದ್ದಾನೆ. ಅವನ ಶರಾಘಾತಕ್ಕೆ ಸಿಕ್ಕಿ ಪಾಂಡವಸೇನೆ ಝುರ್ಝುರಿತವಾಗಿದೆ. ಮಹಾವೀರ ಪಾರ್ಥ ಗಾಂಗೇಯನ ಹೊಡೆತದಿಂದ ಸೋತು ಹಣ್ಣಾಗಿದ್ದಾನೆ. ಸಾರಥಿಯಾದ ಪುರುಷೋತ್ತಮನ ಸಹನೆ ಮೀರುತ್ತದೆ. ಗಾಂಗೇಯ ಜೀವಂತನಾಗಿರುವವರೆಗೆ ಪಾಂಡವರಿಗೆ ಗೆಲುವು ದಕ್ಕುವುದಿಲ್ಲ ಎಂದು ಕೃಷ್ಣ ಬಲ್ಲ. ತಾನು ಮಾಡಿದ್ದ ಶಪಥವನ್ನು ಮರೆತು ರಥದಿಂದ ಧುಮುಕಿ ಕೈಯಲ್ಲಿ ಚಕ್ರ ಹಿಡಿದು ಗಾಂಗೇಯನನ್ನು ಎದುರಿಸಲು ಹೊರಡುತ್ತಾನೆ. ಕೈಯಲ್ಲಿದ್ದ ಧನುರ್ಬಾಣಗಳನ್ನು ಅತ್ತ ಒಗೆದು ಗಾಂಗೇಯ ಬಾಹು ಚಾಚಿ 'ಬಾ, ಬಾರೆನ್ನ ಭಾಗ್ಯದ ಬೆಳಕೇ, ನಿನ್ನ ಕೈಯಲ್ಲಿ ಸಾಯುವ ಸೌಭಾಗ್ಯಕ್ಕಿಂತ ಇನ್ನೇನು ಬೇಕು' ಎನ್ನುತ್ತಾನೆ. ಮೃತ್ಯುವನ್ನು ತಾನೇ ಕೈನೀಡಿ ಕರೆದು ಅಪ್ಪುವ ಗಾಂಗೇಯನ ಚಿತ್ರ – ಅದರ ಹಿಂದಣ ಚಿತ್ತವೃತ್ತಿ ಭಾರತ ಸಂಸ್ಕೃತಿಯ, ಭಾರತ ಪೌರುಷದ ಕುರುಹುಗಳಾಗಿವೆ.

ಇದು ನಮ್ಮ ಸಂಸ್ಕೃತಿಯ ಭಂಡಾರ. ಈ ಅನರ್ಘ್ಯ ರತ್ನಾಭರಣವನ್ನು ಕಾಪಾಡಿಕೊಂಡು, ಜಗತ್ತಿನ ಕಲ್ಯಾಣಕ್ಕೆ ಉಪಯೋಗಿಸಬೇಕಾದ ಹೊಣೆಗಾರಿಕೆ ನಮ್ಮ ಮೇಲಿದೆ. ರಾಮಾಯಣ, ಭಾರತಗಳನ್ನು ನಾವು ಇಂದು ಆದರಿಸಬೇಕಾದುದು ಅವು ಹಳೆಯವು ಎನ್ನುವ ದೃಷ್ಟಿಯಿಂದಲ್ಲ – ಅವು ನಿತ್ಯ ನೂತನವಾದ ಸತ್ಯವನ್ನು ಸಾರುವ ಬುಗ್ಗೆಗಳಾಗಿವೆ ಎಂದು. ರಾಮನ ಆದರ್ಶ, ಭರತನ ತ್ಯಾಗ, ಭೀಷ್ಮನ ಧೀಃಶಕ್ತಿ ಇಂದು ನಮಗೆ ಬೇಡವೆ? ಸೀತೆ, ಮಂಡೋದರಿ, ಗಾರ್ಗಿ, ಮೈತ್ರೇಯಿಯರ ನಿಷ್ಕಳಂಕ ಜೀವನ ನಮಗಿಂದು

ಮಾರ್ಗ ತೋರಿಸಲಾರದೇ? ರೈಕ್ವ, ಸತ್ಯಕಾಮ, ಧರ್ಮವ್ಯಾಧರನ್ನು ಮಹರ್ಷಿಗಳೆಂದು ಸಾರಿದ ಸಾಹಿತ್ಯದಲ್ಲಿ ಸತ್ವವಿಲ್ಲವೇ? ಬುದ್ಧನನ್ನು ಭಗವಂತನ ಅವತಾರ ಎಂದು ಒಪ್ಪಿಕೊಂಡ ಅಪ್ಪಿಕೊಂಡ ನಾಡಿನ ಸಂಸ್ಕೃತಿ ಕ್ಷಣಿಕವಾದುದೇ?

ಪ್ರಾಚೀನ ಸಂಸ್ಕೃತಿಯ ಹೆಚ್ಚಳವನ್ನು ಎತ್ತಿಸಾರುವ ಭರದಲ್ಲಿ ನಾನು ಅರ್ವಾಚೀನ ಜೀವನದ ಆವಶ್ಯಕತೆಗಳನ್ನು ಕಡೆಗಾಣಿಸುತ್ತಿಲ್ಲ. ಇಪ್ಪತ್ತನೆಯ ಶತಮಾನದಲ್ಲಿ ನಾವಿಂದು ಹೊಸ ಜೀವನ, ಹೊಸ ಸಂಸ್ಕೃತಿಯನ್ನು ಹುಟ್ಟಿ ಹಾಕುತ್ತೇವೆನ್ನುವುದು ಸಲ್ಲದ ಮಾತು. ಆಧುನಿಕ ಪಾಶ್ಚಾತ್ಯ ಜೀವನವೂ ಪ್ರಾಚೀನ ಗ್ರೀಕ್ ಸಂಸ್ಕೃತಿಯ ಬುನಾದಿಯ ಮೇಲೆ ನಿಂತಿದೆ. ನಮ್ಮ ಬುನಾದಿ ದುರ್ಬಲವಾಗದಂತೆ ನೋಡಿಕೊಳ್ಳಬೇಕಾದುದು ನಮ್ಮ ಕರ್ತವ್ಯ. ಕಟ್ಟುವ ಕಟ್ಟಡ ಯಾವ ಶಿಲ್ಪಸಂಪ್ರದಾಯಕ್ಕೆ ಸೇರಿದುದಾದರೂ ಅದರ ಅಸ್ತಿಭಾರ ಸುಭದ್ರವಾಗಿರಬೇಕು. ಮೊದಲು ನಮ್ಮ ಪರಂಪರೆಯ ಪೂರ್ಣಪ್ರಜ್ಞೆ ತಂದುಕೊಳ್ಳೋಣ. ಪರಂಪರೆಯಿಂದ ಇಂದಿನ ನಮ್ಮ ಜೀವನಕ್ಕೆ ಯಾವ ಶಕ್ತಿ, ಸ್ಫೂರ್ತಿ ದೊರೆಯುತ್ತದೆಯೋ ಅದನ್ನು ತಂದು ಕೊಳ್ಳೋಣ. ಸಾಲದೆ ಬಂದುದನ್ನು ಹೊರಗಿನಿಂದ ತಂದುಕೊಂಡರಾಯಿತು.

ಇದುವರೆಗೆ – ಈ ಇನ್ನೂರು ವರ್ಷಗಳು ನಮ್ಮ ಉದ್ಯಮವೆಲ್ಲಾ ಹೊರಗಿನಿಂದ ತಂದುಕೊಳ್ಳುವುದೇ ಆಗಿದೆ. ಪ್ರತಿಯೊಂದು ವಿಷಯಕ್ಕೂ ನಾವು ಇಂಗ್ಲೆಂಡ್, ಅಮೇರಿಕಾ, ರಷ್ಯಾ ದೇಶಗಳ ಕಡೆ ನೋಡುತ್ತಿದ್ದೇವೆ. ಜೀವನದ ನಿಸರ್ಗ ಸುಭಗತೆಯನ್ನು ಕಳೆದುಕೊಂಡು ಕೃತಕಜೀವನವನ್ನು ಏರ್ಪಡಿಸಿಕೊಂಡಿರುವ ನಾವು ರಾಜಕೀಯ ದೃಷ್ಟಿಯಿಂದ ಸ್ವತಂತ್ರರಾಗಿದ್ದರೂ ವಿಚಾರದೃಷ್ಟಿಯಿಂದ ತೀರ ಪರತಂತ್ರರಾಗಿದ್ದೇವೆ. ನಮ್ಮ ದೇಶದ ಸ್ವಾತಂತ್ರ್ಯ ಸುಸ್ಥಿರವಾಗಿ ಉಳಿಯಬೇಕಾದರೆ ಹೊರಗಿನವರ 'ಬಾಯೆಂಜಲಿಗೆ ಕೈಯಾನುವ' ಮನೋವೃತ್ತಿಯನ್ನು ಪರಿಹರಿಸಿಕೊಳ್ಳಬೇಕು. ಬರ್ಟ್ರಂಡ್ ರಸಲ್, ಮಾರಿಸ್ಟೋಪ್ಸ್, ಲೆನಿನ್, ಈಲಿಯಟ್ ಇವರಿಂದ ಕಲಿಯಲು ಸಿದ್ಧವಾಗಿರುವ ನಾವು ಆಚಾರ್ಯ ಶಂಕರರು, ವಾತ್ಸ್ಯಾಯನ, ಕೌಟಿಲ್ಯ, ಕಾಳಿದಾಸರಿಂದ ಕಲಿಯಲು ಹಿಂಜರಿಯುವುದು ನಮ್ಮ ಮಾನಸಿಕ ಪತನದ ಕುರುಹು. ನಾವು ಹೊರಗಿನವರಿಂದ ಕಲಿಯುವ ಹವ್ಯಾಸದ ಬದಲು

ಅವರಿಗೆ ಕಲಿಸುವ ಉದ್ಯಮ ಕೈಗೊಳ್ಳಬೇಕು. ಭಾರತ ಸಂಸ್ಕೃತಿಯ ಅವಹೇಳನವನ್ನು ನಾವು ಭಾರತೀಯರಿಂದಾಗಲಿ, ಹೊರಗಿನವರಿಂದಾಗಲಿ ಕೇಳಿ ಸಹಿಸಲು ಸಾಧ್ಯವಿಲ್ಲವೆಂದು ಘಂಟಾಘೋಷವಾಗಿ ಸಾರಬೇಕು.

ಭಾರತ ಶಕ್ತಿ ಅಸುರೀಶಕ್ತಿಯಲ್ಲ. ಅದು 'ನನಗೆ ಬೇಕು – ಬೇಕು' ಎಂದು ಹಾಹಾಕಾರ ಪಡುವುದಿಲ್ಲ; 'ನಿನಗೇನು ಬೇಕು, ಕೊಡುತ್ತೇನೆ' ಎಂದು ಹೇಳುತ್ತದೆ. ಭಾರತ ಶಕ್ತಿಯ ಗುರಿ ಕ್ರಾಂತಿಯಲ್ಲ, ಶಾಂತಿ. 'ಲೋಕ ನಾಶವಾದರೂ ಚಿಂತೆಯಿಲ್ಲ, ನಾನು ಗಟ್ಟಿಯಾಗಿ ಉಳಿದರೆ ಸಾಕು' ಎಂದು ಪಾಶ್ಚಾತ್ಯ ಸಂಸ್ಕೃತಿ ಹೇಳುತ್ತಿದೆ; ಲೋಕ ನಾಶವಾಗದೆ ಉಳಿಯುವ ಮಾರ್ಗವನ್ನು ಭಾರತ ತೋರಿಸಿಕೊಡುತ್ತಿದೆ. ಭಾರತೀಯರು ತಮ್ಮ ಋಜುಜೀವನದ ಕಡೆಗೆ ದೃಷ್ಟಿಯಿಟ್ಟು ಶಾಂತಿದೂತರಾಗುವರೋ, ವಿನಾಶದ ಪ್ರವಾದಿಗಳಾಗುವರೋ ಎನ್ನುವ ಮಹಾಸಮಸ್ಯೆ ನಮ್ಮ ಮುಂದಿದೆ.

---

# ೬. ಕಾದಂಬರಿಯ ಭಾವಪ್ರವಾಹ

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಇಂದು ಕಾದಂಬರಿ ವಿಶಿಷ್ಟ ಸ್ಥಾನ ಪಡೆದಿದೆ. ಇತರ ಸಾಹಿತ್ಯ ಪ್ರಕಾರಗಳನ್ನು ಕಾದಂಬರಿ ಮೂಲೆಗೊತ್ತಿ ತಾನು ತಲೆಯೆತ್ತಿ ನಿಂತಿದೆಯೆಂದರೂ ತಪ್ಪಾಗಲಾರದು. ಕೇವಲ ಒಂದು ದಶಕದ ಅವಧಿಯಲ್ಲಿ ಕಾದಂಬರಿ ಇಂಥ ಪ್ರಭಾವ ಬೀರುವುದಕ್ಕೆ ಅದರ ಹಿನ್ನೆಲೆಯನ್ನು ಸ್ವಲ್ಪ ವಿಚಾರಮಾಡಬೇಕಾದುದಗತ್ಯ.

ಇಂದು ನಾವು ಯಾವದನ್ನು ಕಾದಂಬರಿ ಎಂದು ಕರೆಯುತ್ತೇವೆಯೋ ಅದು ಕನ್ನಡಕ್ಕೆ ತೀರ ಹೊಸದು. ೧೮ನೆಯ ಶತಮಾನದಲ್ಲಿ ಕೆಂಪೂ ನಾರಾಯಣಪಂಡಿತ ವಿಶಾಖದತ್ತನ ಮುದ್ರಾರಾಕ್ಷಸ ನಾಟಕಕ್ಕೆ 'ಮುದ್ರಾ ಮಂಜೂಷ'ವೆಂದು ಹೆಸರಿಟ್ಟು ಕಾದಂಬರಿ ರೂಪದಲ್ಲಿ ಬರೆದ. ಆದರೆ ಎಂ. ಎಸ್. ಪುಟ್ಟಣ್ಣನವರ 'ಮಾಡಿದ್ದುಣ್ಣೋ ಮಾರಾಯ' ಮತ್ತು ಕೆರೂರು ವಾಸುದೇವಾಚಾರ್ಯರ 'ಇಂದಿರಾ' ಕಾದಂಬರಿಗಳು ಸ್ವತಂತ್ರ ಕೃತಿಗಳಾದುದರಿಂದ ಅವುಗಳಿಂದ ನಮ್ಮ ಆಧುನಿಕ ಕಾದಂಬರಿಯ ಇತಿಹಾಸ ಆರಂಭವಾಯಿತೆಂದು ಹೇಳಬಹುದು. ಪುಟ್ಟಣ್ಣನವರ ಮತ್ತು ವಾಸುದೇವಾಚಾರ್ಯರ ಕೃತಿಗಳು ಪ್ರಕಟವಾದ ಅನೇಕ ವರ್ಷಗಳ ತರುವಾಯ ಪ್ರಕಟವಾದ ಆಲೂರು ವೆಂಕಟರಾಯರ 'ಕರ್ನಾಟಕ ಗತವೈಭವ' ಮತ್ತು ಬಿ. ಎಂ. ಶ್ರೀಕಂಠಯ್ಯನವರ 'ಇಂಗ್ಲೀಷ್ ಗೀತೆಗಳು' ಕನ್ನಡ ಸಾಹಿತ್ಯದ ನವೋದಯಕ್ಕೆ ಕಾರಣವಾದಂತೆ 'ಮಾಡಿದ್ದುಣ್ಣೋ ಮಾರಾಯ' – 'ಇಂದಿರಾ' ಕಾರಣವಾಗಲಿಲ್ಲ.

ನವೋದಯದ ಬುನಾದಿ ಹಾಕುವುದಕ್ಕೆ ಒಂದು ಕೃತಿಯಲ್ಲಿರಬೇಕಾದ ಲಕ್ಷಣಗಳೆಲ್ಲವೂ 'ಮಾಡಿದ್ದುಣ್ಣೋ ಮಾರಾಯ' ಕಾದಂಬರಿಯಲ್ಲಿದ್ದವು. ನೂತನವಾದ ಸರಳ ಶೈಲಿ, ಜನಜೀವನದ ಆವಿಷ್ಕಾರ, ವಿಚಾರಕ್ರಾಂತಿ, ಋಜು ತತ್ತ್ವಗಳ ಬಗ್ಗೆ ಗೌರವ. ಆದರೂ ಸಮಕಾಲೀನ ಸಾಹಿತ್ಯ ವಿಕಾಸದ ಮೇಲೆ ಪುಟ್ಟಣ್ಣನವರ ಕೃತಿ ಯಾವ ಪ್ರಭಾವವನ್ನು ಬೀರಲಿಲ್ಲ.

ಇವರ ಕಾರಣಗಳನ್ನು ನಾವು ಅರಸಬಹುದು. ಪುಟ್ಟಣ್ಣನವರ ಕಾಲಕ್ಕೆ ಕನ್ನಡಾಭಿಮಾನ ಕನ್ನಡ ಜನಗಳಲ್ಲಿ ಏನೂ ಬೆಳೆದಿರಲಿಲ್ಲ. ಕನ್ನಡ ಗ್ರಂಥ, ಪತ್ರಿಕೆಗಳನ್ನು ಓದುತ್ತಿದ್ದವರು ಮನೆಯಲ್ಲಿದ್ದ 'ಫೀಮೆಲ್'ಗಳು. ಇಂಗ್ಲಿಷ್ ವಿದ್ಯೆ ಕಲಿತಿದ್ದ ಪುರುಷಪುಂಗವರು ಕನ್ನಡ ಓದುವುದು–ಬರೆಯುವ ಮಾತು ಹಾಗಿರಲಿ – ಕನ್ನಡದಲ್ಲಿ ಮಾತನಾಡುವುದು ತಮ್ಮ ಆತ್ಮಗೌರವಕ್ಕೆ ಕುಂದು ಎಂದು ಭಾವಿಸುತ್ತಿದ್ದರು. ಈ ಸಂಧಿಕಾಲವಲ್ಲಿ ಹಲವು ಮಹನೀಯರು ತ್ರಿಕರಣಪೂರ್ವಕವಾಗಿ ದುಡಿದು ಕನ್ನಡ ಮಾತನಾಡುವುದು, ಬರೆಯುವುದು, ಓದುವುದು, ಸ್ವಾಭಿಮಾನದ ಕುರುಹೆಂದು ತೋರಿಸಿಕೊಟ್ಟರು.

ಕನ್ನಡ ಕಣ್ಣುಬಿಡುತ್ತಿದ್ದ ಕಾಲದಲ್ಲಿ ಬಿ. ಎಂ. ಶ್ರೀಕಂಠಯ್ಯನವರು ಕನ್ನಡ – ಇಂಗ್ಲಿಷ್ ಭಾಷೆಗಳ ಪ್ರಧಾನ ಪಂಡಿತರಾಗಿದ್ದರು. ಅವರ ಹಲವು ಶಿಷ್ಯರು ಗುರುವಿನ ಮಾರ್ಗ ಅನುಸರಿಸಿ ಕಾವ್ಯದಲ್ಲಿ ಬಗೆಬಗೆಯ ಪ್ರಯೋಗಗಳನ್ನು ಮಾಡತೊಡಗಿದರು. ಶ್ರೀಯುತರು ಕಾದಂಬರಿಕಾರರಾಗಿದ್ದರೆ ನವೋದಯ ಕಾಲದಲ್ಲಿಯೇ ಕಾದಂಬರಿ ತಲೆಯೆತ್ತುತ್ತಿತ್ತು.

ಪ್ರೌಢವರ್ಗದ ವಿದ್ವಜ್ಜನ ಸಾಹಿತ್ಯ ಮಂಟಪದಲ್ಲಿ ಕಾದಂಬರಿಗೆ ಉಚ್ಚಸ್ಥಾನ ಕೊಡಲೊಪ್ಪುವುದಿಲ್ಲ. ಕಾವ್ಯ, ನಾಟಕ ಎರಡೂ ಪಂಡಿತ ರಂಜನೆಯ ಸಾಧನಗಳೆಂದೂ ಕಥೆ, ಕಾದಂಬರಿ, ಲಾವಣಿ ಪಾಮರ ಜನತೆಯ ಸಾಧನೆಗಳೆಂದೂ ವಿದ್ವಜ್ಜನರು ವಿಧಾಯಕಮಾಡಿದ್ದಾರೆ.

ನವೋದಯ ಕಾಲದ ಕನ್ನಡ ಸಾಹಿತಿಗಳು ಪಾಮರಜನತೆಯನ್ನು ಮೆಚ್ಚಿಸಿ ಅವರಿಗೆ ವಿವೇಕ, ವಿಚಾರವನ್ನು ನೀಡುವ ಪ್ರಯತ್ನಮಾಡಲಿಲ್ಲ. ಅವರ ದೃಷ್ಟಿ ವಿದ್ವಜ್ಜನರ ಕಡೆಗೂ, ಅರಮನೆ, ಗುರುಮನೆಗಳ ಕಡೆಗೂ ಇದ್ದಿತು. ಪಂಪ, ರನ್ನ, ಪೊನ್ನರಿಂದ ಯಾವ ಕಾರಣಕ್ಕೆ ಜನಪದ ಮುಖವಾದ ಸಾಹಿತ್ಯ ಬರಲಿಲ್ಲವೋ ಅದೇ ಕಾರಣಕ್ಕಾಗಿ ನವೋದಯ ಸಾಹಿತಿಗಳಿಂದ ಜನಪದಕ್ಕೆ ಅವಶ್ಯವಾಗುವ ಸಾಹಿತ್ಯ ಬರಲಿಲ್ಲ. ಭಾಷೆ, ಭಾವ ಎರಡು ದೃಷ್ಟಿಯಿಂದಲೂ ಅವರ ಸಾಹಿತ್ಯ ತನ್ನ 'ದಂತದ ಅರಮನೆ' ಯಿಂದ ಇಳಿದುಬರಲಿಲ್ಲ.

ಭಾಷೆಯ ತೊಡಕನ್ನು ಹೇಗೆ ಬಿಡಿಸಬಹುದೆಂಬುದನ್ನು ಪುಟ್ಟಣ್ಣನವರು ತೋರಿಸಿದ್ದರು. ಅದನ್ನೇ ವಿಸ್ತರಿಸಿ ನಾಟಕದಲ್ಲಿ ವಿಪುಲವಾಗಿ ಬಳಸಿದವರು

ಕೈಲಾಸಂ; ಕಾವ್ಯವಲ್ಲಿ ಬಳಸಿದವರು ಬೇಂದ್ರೆ ಮತ್ತು ರಾಜರತ್ನಂ. ವಿಚಾರ ದೃಷ್ಟಿಯಿಂದ ಕೈಲಾಸಂ ಕ್ರಾಂತಿಕಾರಕ ಮನೋಭಾವ ತೋರಲಿಲ್ಲ. ಪಂಪ ಚಂಪೂಶೈಲಿಯಲ್ಲಿ ಹೇಳಿದುದನ್ನೇ ಕೈಲಾಸಂ 'ಆಂಗ್ಲ ಕನ್ನಡ'ದಲ್ಲಿ ಹೇಳಿದರು. ಸಮಾಜದ ಮಧ್ಯಮವರ್ಗ, ಕನಿಷ್ಠವರ್ಗದವರ ಬಗ್ಗೆ ಕೈಲಾಸಂಗೆ ಇದ್ದ ಸಹಾನುಭೂತಿ ಒಬ್ಬ ಆಶ್ರಯದಾತನ ಸಹಾನುಭೂತಿ. ಕನಿಷ್ಠವರ್ಗದ ವ್ಯಕ್ತಿಗಳ ಚಿತ್ರಗಳನ್ನು ಕೈಲಾಸಂ ಸಹಾನುಭೂತಿಯಿಂದಲೇ ಚಿತ್ರಿಸಿದ್ದರೂ 'ಎಷ್ಟು ಅಂತರ' ಎಂಬ ಭಾವನೆ ನಮ್ಮ ಮನಸ್ಸಿನಲ್ಲಿ ಮೂಡದೆ ಬಿಡುವುದಿಲ್ಲ. ಕೈಲಾಸಂ ನಾಟಕಗಳನ್ನು ನೋಡುವ ಕನಿಷ್ಠವರ್ಗದ ಜನ 'ಇದು ನಮ್ಮ ಚಿತ್ರವಲ್ಲ. ಅದರ ವಿಡಂಬನೆ; ಇವರು ತೋರುತ್ತಿರುವುದು ನಮ್ಮ ಮನಸ್ಸಿನ ಆಸೆ ಆಕಾಂಕ್ಷೆಗಳನ್ನಲ್ಲ, ಉತ್ತಮವರ್ಗದವರ ದೃಷ್ಟಿಕೋನ' ಎಂದು ಭಾವಿಸುವುದು ಸ್ವಾಭಾವಿಕವಾಗಿದೆ. ಸಾಹಿತ್ಯ, ಜೀವನದ ಕನ್ನಡಿಯಾಗಿರ ಬೇಕು ಎಂದು ಷೇಕ್ಸ್‌ಪಿಯರ್ ವ್ಯಕ್ತಪಡಿಸಿದ ಅಭಿಪ್ರಾಯವನ್ನೇ ನಮ್ಮ ಸಾಹಿತಿಗಳೂ ಸಮರ್ಥಿಸುತ್ತ ಬಂದರು.

ಸಾಹಿತಿ ಜೀವನದ ಕನ್ನಡಿ ಮಾತ್ರವೇ ಅಲ್ಲ. ಅದರ ಮಹಾ ಶಿಲ್ಪಿಯಾಗಿದ್ದಾನೆ. ಜೀವನದ ಕೆಸರನ್ನು ಕಳೆದು ಅದು ನಿತ್ಯಸೌಂದರ್ಯ ದಿಂದ ವಿರಾಜಿಸುವಂತೆ ಮಾಡಬೇಕಾದುದು ಅವನ ಕರ್ತವ್ಯ ಎಂಬ ಭಾವನೆ ಉಪನಿಷತ್ತುಗಳ ಕಾಲದ್ದು. ಕವಿಯಲ್ಲಿ ಋಷಿಯಂಶವಿರಬೇಕೆಂದು ಉಪನಿ ಷತ್ತುಗಳು ವಿಧಿಸಿದಾಗ ಹೆಚ್ಚು ಕಡಿಮೆ ಮಾರ್ಕ್ಸ್‌ವಾದವನ್ನೇ ಅವು ಪ್ರತಿಪಾದಿಸಿದವು.

ಕಳೆದ ಶತಮಾನದ ಕೊನೆಯಭಾಗ ಸಾಹಿತ್ಯಮುಖವನ್ನು ರಾಜರು, ಶ್ರೀಮಂತರು, ಮಠಾಧಿಪತಿಗಳು ಇವರ ಕಡೆಯಿಂದ ಜನಪದದ ಕಡೆಗೆ ಎಳೆಯಿತು. ಟಾಲಸ್ಟಾಯ್, ಜೋಲಾ, ರೋಮೆರೋಲಾ, ಬರ್ನಾರ್ಡ್ ಷಾ, ಅಪ್ಟನ್‌ಸಿಂಕ್ಲೇರ್, ವೆಲ್ಸ್ ಮೊದಲಾದ ಪ್ರತಿಭಾಶಾಲಿ ಲೇಖಕರು ಸಾಹಿತ್ಯವನ್ನು ಸುವರ್ಣ ಪಂಜರದಿಂದ ಹೊರತೆಗೆದು ಕಾರ್ಮಿಕರ ಚಾಲುಗಳಿಗೂ, ರೈತರ ಗುಡಿಸಲುಗಳಿಗೂ, ವಿದ್ಯಾರ್ಥಿಗಳ ರೂಮುಗಳಿಗೂ ಒಯ್ದರು. ಸಾಹಿತ್ಯದ ಈ ಸ್ವರೂಪವನ್ನು ಕಾದಂಬರಿ ಪ್ರತಿಬಿಂಬಿಸಿದಂತೆ ಮತ್ತಾವ ಸಾಹಿತ್ಯಪ್ರಕಾರವೂ ಪ್ರತಿಬಿಂಬಿಸಲಿಲ್ಲ.

ಕಾದಂಬರಿಯನ್ನು ಇಪ್ಪತ್ತನೆಯ ಶತಮಾನದ ವಾಣಿಯೆಂದೂ ಶ್ರಮಜೀವಿಗಳ ಭಾವೋಚ್ಚಾರಣೆಯ ಪರಮಸಾಧನವೆಂದೂ ನಾವು ಧಾರಾಳವಾಗಿ ಭಾವಿಸಬಹುದು. ಶ್ರೇಷ್ಟವರ್ಗದ ಪ್ರವಾದಿಗಳಾಗಿರುವ ಕೆಲವು ಲೇಖಕರನ್ನುಳಿದು, ಬಹುಮಂದಿ ಇಂದು ಸಾಮಾನ್ಯ ಜನತೆಯನ್ನು, ಅವರ ಕಷ್ಟಸುಖಗಳನ್ನು ಪ್ರತಿಬಿಂಬಿಸುತ್ತಿದ್ದಾರೆ. ಮೊಟ್ಟಮೊದಲಿಗೆ ಕಾರ್ಮಿಕರ ಜೀವನವನ್ನು ವಸ್ತುವನ್ನಾಗಿ ತೆಗೆದುಕೊಂಡು, ಅವರ ರೀತಿನೀತಿಗಳನ್ನು, ಶಕ್ತಿ ದೌರ್ಬಲ್ಯಗಳನ್ನು ಅನ್ಯಾದೃಶವಾಗಿ ಚಿತ್ರಿಸಿದವನು ಫ್ರಾನ್ಸಿನ ಎಮಿಲ್‌ಜೋಲಾ. ಅವನ 'ಜರ್ಮಿನಾಲ್' ಕಾದಂಬರಿ, ಮುಂದೆ ಅಪ್ಟನ್ ಸಿಂಕ್ಲೇರನ ಸಮಸ್ತ ಕೃತಿಗಳ ಭದ್ರ ಬುನಾದಿಯಾಯಿತು. ಸಿಂಕ್ಲೇರ್ ತನ್ನ 'ಜಂಗಲ್', 'ಬಾಸ್ಟನ್', 'ಆಯಿಲ್' ಕಾದಂಬರಿಗಳಲ್ಲಿ ಇದೇ ಬಗೆಯ ಜೀವನವನ್ನು ಹೆಚ್ಚು ವಿಷಯಸಂಗ್ರಹದೊಡನೆ ನಿರೂಪಿಸಿದ್ದಾನೆ. ರಷ್ಯಾದ ಲೇಖಕರಾದ ಪೋಲಾಕಾಫ್, ಬೂನಿನ್, ಎಹ್‌ರೆನ್‌ಬರ್ಗ್ ಶ್ರಮಜೀವಿಗಳ ಚಿತ್ರಗಳನ್ನು ಕೊಡುವುದರೊಂದಿಗೆ ನೂತನ ರಷ್ಯಾ ಹೇಗೆ ಶ್ರಮಜೀವಿಗಳ ರಾಜ್ಯವಾಗಿ ರೂಪುಗೊಳ್ಳುತ್ತಿದೆ ಎಂಬ ಅಂಶವನ್ನು ಸ್ಪಷ್ಟಪಡಿಸಿದ್ದಾರೆ. ಎಥಿಲ್ ಮ್ಯಾನಿನ್ ತನ್ನ 'ಚಿಲ್ಡ್ರನ್ ಆಫ್ ಆರ್ತ್' ಕಾದಂಬರಿಯಲ್ಲಿ ರೈತಾಪಿವರ್ಗದ ಒಳತೋಟಿಯನ್ನು ಅದ್ಭುತವಾಗಿ ಪ್ರಥಃಕರಿಸಿದ್ದಾಳೆ. ಸಾಂಸ್ಕೃತಿಕ ದೃಷ್ಟಿಯಿಂದ ತೀರ ಕೆಳದರ್ಜೆಯವರೆಂದು ಪರಿಗಣಿತವಾಗಿದ್ದ ಚೀನಿ ಜನತೆಯ ಒಳಜೀವನವನ್ನು ತನ್ನ ಕಾದಂಬರಿಗಳಲ್ಲಿ ಬಿಚ್ಚಿತೋರಿಸಲು ಪರ್ಲ್‌ಬಕ್ ಪ್ರಯತ್ನಿಸಿದ್ದಾಳೆ.

ಈಚಿನ ರಾಜಕೀಯ ಘಟನೆಗಳು, ಅಂತರರಾಷ್ಟ್ರೀಯ ಜೀವನದ ಮೇಲೆ ಅವು ಬೀರುತಿರುವ ಪ್ರಭಾವ ಹಲವು ಕಾದಂಬರಿಕಾರರ ವಸ್ತುಗಳಾಗಿವೆ. ಲಿ ಯು ಟಾಂಗ್, ಇಗ್ನಾಜಿಯೋ ಸಿಲಾನ್, ಮಾಲರೂ, ಟಾಲಸ್ಟಾಯ್, ಎಹ್‌ರೆನ್‌ಬರ್ಗ್, ಕಾಸ್ಲರ್ ಇವರ ಕಾದಂಬರಿಗಳು ಬಂಡವಾಳಶಾಹಿಗಳ, ಸಾಮ್ರಾಜ್ಯಶಾಹಿಗಳ ಕೈಗೆ ಸಿಕ್ಕಿದ ನಿರಪರಾಧಿ ಜನತೆ ಅವರ ರಾಕ್ಷಸೀ ಲಾಲಸೆಗೆ ತುತ್ತಾಗಿ ನಾಶವಾಗುವುದರ ದುರಂತ ಚಿತ್ರಗಳನ್ನು ಕೊಟ್ಟಿವೆ.

ಸಾಹಿತ್ಯದ ವೈಯಕ್ತಿಕ ಸ್ವರೂಪವನ್ನು ಗೌಣವಾಗೆಣಿಸಿ ಅದರ ಸಾಮೂಹಿಕ ಸ್ವರೂಪವನ್ನು ವಿಶದೀಕರಿಸುವುದೇ ಇಂದಿನ ಪ್ರಾಗತಿಕ

ಕಾದಂಬರಿಯ ಮುಖ್ಯ ಲಕ್ಷಣ. ನೀಷೆಯ 'ಸೂಪರ್‌ಮ್ಯಾನ್' ಸಿದ್ಧಾಂತ (ಅತಿಮಾನವವಾದ) ವ್ಯಕ್ತಿಯ ಪರಿಪೂರ್ಣ ಬೆಳವಳಿಗೆ, ಅವನ ಅಂತರಂಗದ ಪೂರ್ಣವಿಕಾಸದ ಕಡೆಗೆ ಜನರ ಗಮನವನ್ನು ಸೆಳೆಯಿತು. ಇದರ ಪ್ರಭಾವದಿಂದ ಬಿಸ್ಮಾರ್ಕ್, ಹಿಟ್ಲರ್, ಮುಸಲೀನಿ ಇವರ ಅವತಾರ ವಾಯಿತು. ಅತಿಮಾನವವಾದ ನೀಷೆಯ ಕೈಯಲ್ಲಿ ರಾಕ್ಷಸಶಕ್ತಿಯಾದಂತೆ, ಅರವಿಂದ ಯೋಗಿಗಳ ಕೈಯಲ್ಲಿ ದೇವಶಕ್ತಿಯಾಗಲು ಹವಣಿಸಿತು. ವ್ಯಕ್ತಿ ತನ್ನ ಪ್ರಸುಪ್ತ ಚೇತನವನ್ನು ಜಾಗೃತಗೊಳಿಸಬೇಕು; ತನ್ನ ಒಳಗೆ ಹುದುಗಿರುವ ಅಪಾರ ಶಕ್ತಿಯನ್ನರಿತುಕೊಳ್ಳಬೇಕು; ಆ ಶಕ್ತಿಯನ್ನು ಮಾನವ ಕಲ್ಯಾಣಕ್ಕೆ ಉಪಯೋಗಿಸಬೇಕು ಎಂದು ಅರವಿಂದರು ಪ್ರತಿಪಾದಿಸಿದರು. ಹಟಯೋಗದ ಆರಂಭದೆಸೆಯಲ್ಲಿಯೇ ಸುಲಭವಾಗಿ ಕೈವಶವಾಗುವ ಕೆಲವು ಸಾಮಾನ್ಯ ಶಕ್ತಿಯನ್ನು ಮನುಷ್ಯ ಜೀರ್ಣಿಸಿಕೊಳ್ಳಲಾಗದೆ, ದುರುಪಯೋಗ ಪಡಿಸುವಾಗ ಅತಿಶಕ್ತಿಯನ್ನು ದೊರಕಿಸಿಕೊಂಡ ಮಾನವ ಅದನ್ನು ದೇವತೆ ಯಂತೆ ಉಪಯೋಗಿಸಬೇಕೆಂಬ ವಾದ ಅಸಹಜವಾದುದೆಂಬ ಅಕ್ಷೇಪಣೆ ಎದ್ದಿದೆ. ಫ್ರಾನ್ಸಿನ ರೋಮೆ ರೋಲಾ ಈ ಎರಡು ವಿಚಾರವಾಹಿನಿಗಳಿಗೆ ಸೇತುವೆ ಕಟ್ಟಿದ್ದಾರೆ. ಅವರ 'ಜಾನ್ ಕ್ರಿಸ್ಟೋಫರ್' ಗ್ರಂಥದ ನಾಯಕ ಅತಿಮಾನವನಲ್ಲ. ಸಾಮಾನ್ಯಮಾನವ. ಬಡತನದಲ್ಲಿ ಹುಟ್ಟುತ್ತಾನೆ, ಬೆಳೆಯುತ್ತಾನೆ. ಕಣ್ತುಂಬ ತಾಪ ನೋಡುತ್ತಾನೆ. ಆದರೆ ತಾನು ಕಾಣು ತ್ತಿರುವುದು ತಾಪ ಎಂಬ ತಿಳುವಳಿಕೆ ಅವನಲ್ಲಿ ಮೂಡಿರುತ್ತದೆ. ಕ್ರಿಸ್ಟೋಫರ್ ಶಕ್ತಿಸಾಧನೆಗೆ ಹೊರಡುವುದಿಲ್ಲ. ಅವನು ಸೌಂದರ್ಯಾರಾಧಕನಾಗುತ್ತಾನೆ. ಸತ್ಯಾವಿರ್ಭೂತವಾದ ಸೌಂದರ್ಯವೇ ನಿತ್ಯ ಸೌಂದರ್ಯ, ಉಳಿದುದು ಅನಿತ್ಯ ಎಂಬ ನಿಷ್ಠೆ. ಅವನಲ್ಲಿ ಬೆಳೆಯುತ್ತದೆ. ಸತ್ಯ, ಸೌಂದರ್ಯ ಅವನಿಗೆ ಅಜೇಯ ಶಕ್ತಿಯನ್ನೂ ಒದಗಿಸುತ್ತವೆ. ಪರಿಪೂರ್ಣನೂ, ಪರಿಶುದ್ಧನೂ ಆಗುತ್ತಿರುವ ಕ್ರಿಸ್ಟೋಫರ್ ತನ್ನಲ್ಲಿ ಸಮಾವೇಶನಾಗುತ್ತಿದ್ದ ಶಕ್ತಿಯನ್ನು ದಮನ ಮಾಡಬಲ್ಲ. ಹಲವು ಜೀವಿಗಳಲ್ಲಿರುವ ಶಕ್ತಿಯನ್ನು ಕ್ರಿಸ್ಟೋಫರ್ ಅರ್ಥ ಮಾಡಿಕೊಂಡು ಅದನ್ನು ತನ್ನ ಕೃತಿಗಳಲ್ಲಿ ತರಲೆತ್ನಿಸಿದುದರಿಂದಲೆ ಅವನು ಅತಿಮಾನವ ನಾಗುತ್ತಾನೆ. ಆದರೆ ಅವನ ಅತಿಮಾನವತ್ವ, ಮಾನವಾತೀತವಾದುದಲ್ಲ. ದೊರೆಗಳ ದೊರೆಯೂ, ಋಷಿಗಳ ಋಷಿಯೂ, ದಾರ್ಶನಿಕರ ದಾರ್ಶನಿಕನೂ

ಆದ ಭಗವಾನ್ ಯೇಸು ಹೇಗೆ ತನ್ನ 'ಸಾಮಾನ್ಯತ್ವ'ವನ್ನು ಕಾಯ್ದುಕೊಳ್ಳು ತ್ತಾನೋ ಹಾಗೆ ಕ್ರಿಸ್ಟೋಫರ್ ತನ್ನ ಮಾನವೀಯತೆಯನ್ನು ಉಳಿಸಿಕೊಂಡು, ಬೆಳಸಿಕೊಳ್ಳುತ್ತಾನೆ. ರೋಲಾ ಅವರ ವಿಚಾರಸರಣಿ ಹೆಚ್ಚುಕಡಿಮೆ ಭಾರತೀಯ ದರ್ಶನವನ್ನೇ ಒಪ್ಪಿಕೊಂಡಂತಾಯಿತು. 'ಸರ್ವಂ ಖಲ್ವಿದಂ ಬ್ರಹ್ಮ' ಎಂದು ಸಾರಿದ ಉಪನಿಷತ್ತು ಮಾನವ ಬ್ರಹ್ಮತ್ವವನ್ನು ಪಡೆಯಬೇಕು ಮಾತ್ರವಲ್ಲ. ಅದನ್ನು ಬ್ರಹ್ಮನಂತೆಯೇ ಉಪಯೋಗಿಸಬೇಕು ಎಂದು ಪರ್ಯಾಯವಾಗಿ ಸೂಚಿಸಿತು.

ಕಳೆದ ಯುದ್ಧವಾದನಂತರ ಯೂರೋಪಿನ ಸಾಹಿತ್ಯಜಗತ್ತಿನಲ್ಲಿ 'ನಿಹಿಲಿಸಂ' (Nihilism) 'ಎಕ್ಸಿಸ್ಟೆಂಟಲಿಸಂ' (Existentalism) 'ಈಲಿಯಟಿಸಂ' (Eliotism) ಆರಂಭವಾಯಿತು. ನಿಹಿಲಿಸಂ ಮತ್ತು ಈಲಿಯಟಿಸಂ ನಮ್ಮ ಕರ್ಮವಾದವನ್ನೇ ಬೋಧಿಸಿ ಮಾನವ ನಿರರ್ಥಕ ವಸ್ತು ಎಂದು ಸಾರಿದವು. ಸರ್ವಕ್ಕೂ ಮಾನವನೇ ಮೂಲಕಾರಣ ಎನ್ನುವ ಜೀನ್‌ಪಾಲ್ ಸಾರ್ಟ್ರೆ ವಾದವೇ ಎಕ್ಸಿಸ್ಟೆಂಟಲಿಸಂ ಎಂದು ಪ್ರಸಿದ್ಧಿಯಾಯಿತು. ಇಂದಿನ ಸಮಾಜವಿಜ್ಞಾನ ನಮಗೆ ಹೇಳುತ್ತಿರುವುದು ಮಾನವನ ವ್ಯಕ್ತಿವಾದ ವನ್ನಲ್ಲ, ವ್ಯಷ್ಟಿವಾದವನ್ನು. ವ್ಯಕ್ತಿ ಒಂದು ಕೃತಿಮಾಡುವುದಕ್ಕೆ ಅವನ ಸಹಜಗುಣಕ್ಕಿಂತಲೂ ಸಾಮಾಜಿಕ ಪರಿಸ್ಥಿತಿ ಕಾರಣವಾಗುತ್ತದೆ ಎಂದು ಹೈತುಕವಾದಿಗಳು ತೋರಿಸಿದ್ದಾರೆ. ಯಾವ ಸಾಮಾಜಿಕ ವೈಪರೀತ್ಯವೂ ಸಮಾಜದಿಂದ ಉಗಮಿಸದೆ ವ್ಯಕ್ತಿಯಿಂದ ಹುಟ್ಟಿದ್ದರೆ, ಅವುಗಳ ಸುಧಾರಣೆ, ನೂತನ ಸಾಮಾಜಿಕ ವ್ಯವಸ್ಥೆಯ ಆಸೆಯನ್ನು ನಾವು ಬಿಟ್ಟುಬಿಡ ಬೇಕಾಗುತ್ತದೆ. ಈ 'ಇಸಂ'ಗಳೆಲ್ಲಾ ಕಳೆದ ಮಹಾಯುದ್ಧದ ಶನಿಸಂತಾನ. ನಿರ್ವಿಣ್ಣರಾದ ಐರೋಪ್ಯ ಸಾಹಿತಿಗಳು ಆದರ್ಶಜಗತ್ತನ್ನು ನಿರ್ಮಿಸುವ ತಮ್ಮ ಕನಸನ್ನು ತಾವೇ ಮುರಿದು ಪಲಾಯನಸೂತ್ರವಾದಿಗಳಾದರು.

ಶತಮಾನಗಳ ದಾಸ್ಯ ನಮ್ಮನ್ನೂ ಪಲಾಯನಸೂತ್ರವಾದಿಗಳನ್ನಾಗಿ ಮಾಡಿತ್ತು. ಆದರೆ ೧೯೪೨ ಲ್ಲಾದರ ಮಹಾಕ್ರಾಂತಿ ಮತ್ತು ೧೯೪೭ ರಲ್ಲಿ ದೊರೆತ ಸ್ವಾತಂತ್ರ್ಯ ನಮ್ಮ ನಾಡಿಗೆ ನವಜೀವನವನ್ನಿತ್ತಿವೆ. ಲೋಕ ಮಿಥ್ಯೆಯಲ್ಲ– ಜೀವನ ನಿರರ್ಥಕವಲ್ಲ. ವ್ಯಕ್ತಿ ಜಗತ್ತಿನ ಒಂದು ಭಾಗ, ಮುಖ್ಯವಾದ ಭಾಗ

ಎಂಬ ವಿಚಾರಲಹರಿ ಸಾರ್ವತ್ರಿಕವಾಗಿ ಹಬ್ಬುತ್ತಿದೆ. ಇದರ ಜೀವನಾಡಿಯನ್ನು ಕನ್ನಡ ಕಾದಂಬರಿಯಲ್ಲಿ ಕಾಣಬಹುದು.

ಒಂದು ಕಛೇರಿಯಲ್ಲಿ ತಿಂಗಳಿಗೆ ೪೦-೫೫ ರೂಪಾಯಿ ಸಂಬಳದ ಮೇಲೆ ದುಡಿಯುವ ಕಾರಕೂನ ಅಲ್ಪಪ್ರಾಣಿ. ಆದರೆ ಆ ಅಲ್ಪಪ್ರಾಣಿಯ ಹೃದಯದಲ್ಲಿ ತೀರದ ಆಸೆಗಳು, ಒಡೆದ ಕನಸುಗಳು, ದಾಸ್ಯ ಸಹಿಸದ ಆತ್ಮಗೌರವ ಹುದುಗಿಕೊಂಡಿವೆ. ಪರಿಸ್ಥಿತಿಯನ್ನು ಕೂಡಲೆ ಎದುರಿಸಲಾಗದ ದೌರ್ಬಲ್ಯದಿಂದ ಅವನು ತೊಳಲುತ್ತಾನೆ. ದಾಸ್ಯದ ಜಗನ್ನಾಥ ರಥ ಅವನನ್ನು ನುಚ್ಚುನೂರುಮಾಡುತ್ತಿದೆ. ಆದರೆ ನಾಶಮಾಡಲಾಗಿಲ್ಲ. ಈ ಪಂಜರದಿಂದ ಹೊರಬೀಳಬೇಕೆಂದು ಮಾತ್ರವೇ ಅಲ್ಲ, ಪಂಜರವನ್ನೇ ನಾಶಮಾಡಬೇಕೆಂದೂ ಅವನ ಹೃದಯ ತಪಕಪಡುತ್ತಿದೆ. ಇದು ಬೀಚಿಯವರ 'ದಾಸಕೂಟ'ದ ವಸ್ತು.

ವೃತ್ತಪತ್ರಿಕೆ ಆದರ್ಶದಲ್ಲಿ ಸಮಾಜದ ಗುರು; ಸಮಾಜದ ನ್ಯಾಯಾಧೀಶ. ವ್ಯಕ್ತಿಯೇ ಆಗಲಿ, ಸಮಾಜವೇ ಆಗಲಿ, ಸರ್ಕಾರವೇ ಆಗಲಿ, ನಾಯಕರೇ ಆಗಲಿ ತಪ್ಪು ಹಾದಿಯಲ್ಲಿ ಹೋಗುತ್ತಿದ್ದರೆ ಅವರಿಗೆ ಎಚ್ಚರ ಕೊಡುವ ಕೈಮರ. ಆದರೆ ಪತ್ರಿಕೆ ನಡೆಸುವುದಕ್ಕೆ ಬಂಡವಾಳಬೇಕು. ಸತ್ಯಾರ್ಥಿಯಾದ ಸಾಹಿತಿ ಬಂಡವಾಳದ ಪರಮವೈರಿ. ಅವನು ಪುರಾಣಪ್ರಸಿದ್ಧ ಸರಸ್ವತೀಭಕ್ತ; ಲಕ್ಷ್ಮೀ ಅವನ ಬಳಿಗೆ ಸುಳಿಯಳು. ಸಾವಿರಾರು ರೂಪಾಯಿ ಬಂಡವಾಳ ಹಾಕಿ ಪತ್ರಿಕೆ ಸ್ಥಾಪಿಸುವ ಬಂಡವಾಳಗಾರ ಅದನ್ನು ಸತ್ಯಪ್ರಿಯ ಸಾಹಿತಿಯ ಆತ್ಮತೃಪ್ತ್ಯರ್ಥವಾಗಿ ನಡೆಸಲಾರ. ತನ್ನ ಸಂಪತ್ತು, ಸ್ಥಾನಮಾನ ಬೆಳೆಯುವುದಕ್ಕೆ ಪತ್ರಿಕೆಯನ್ನೂ ಉಪಯೋಗಿಸಿಕೊಳ್ಳುತ್ತಾನೆ. ಅವನು ಬಿಸುಡುವ ನಾಲ್ಕುಕಾಸಿಗೆ ಕೈಯಾನುವ ಲೇಖಕರು ಅವನಿಗೆ ಹೇರಳವಾಗಿ ದೊರೆಯುತ್ತಾರೆ. ಆದರೆ ಇಂಥ ಪರಿಸ್ಥಿಗೆ ತಲೆಬಾಗದ, ಆತ್ಮವನ್ನು ಮಾರಿಕೊಳ್ಳದ ಕೆಲವು ವ್ಯಕ್ತಿಗಳೂ ಇರುತ್ತಾರೆ — ಮೋತಿಲಾಲ್ ಘೋಷ್, ಬಿ. ಜಿ. ಹಾರ್ನಿಮನ್, ಲಾಲಾಲಜಪತಿರಾಯರಂಥ ಪತ್ರಿಕಾಕರ್ತರು, ಅವರ ಹೋರಾಟದ ಕಥೆಯೇ ತ. ರಾ. ಸು. ಅವರ 'ಮುಂಜಾವಿನಿಂದ ಮುಂಜಾವು' ಕಾದಂಬರಿಯ ವಸ್ತು.

ನಮ್ಮನಾಡಿನ ರಾಜಕೀಯ ಜೀವನವನ್ನು ಕುರಿತು ಕೆಲವು ಕಾದಂಬರಿಗಳು ಪ್ರಕಟವಾಗಿವೆ. ಅವುಗಳನ್ನು ಸಾಮಾನ್ಯವಾಗಿ 'ಮಹಾತ್ಮ

ಗಾಂಧೀಕಿ ಜೈ' ಸಂಪ್ರದಾಯದ ಕಾದಂಬರಿಗಳೆಂದು ಕರೆಯಬಹುದು. ಗಾಂಧೀಜಿ ನಮ್ಮ ಸ್ವಾತಂತ್ರ್ಯಸಂಗ್ರಾಮದ ಹಿಂದಣ ಕ್ರತುಶಕ್ತಿ. ಅವರ ಮಾರ್ಗದರ್ಶನವಿರದಿದ್ದರೆ ಸ್ವಾತಂತ್ರ್ಯ ದೂರದ ಕನಸಾಗುತ್ತಿತ್ತು. ಆದರೆ ಗಾಂಧೀಜಿಯವರ ದಿಗ್ದರ್ಶನವನ್ನು ಮೂವತ್ತು ಮೂರುಕೋಟಿ ಭಾರತ ಪ್ರಜೆಗಳು ಯಾವರೀತಿಯಲ್ಲಿ ಅನುಸರಿಸಿದರು ಎಂದು ನಾವು ನೋಡಬೇಕು. ಈ ಬೃಹದ್ – ರಾಷ್ಟ್ರದಲ್ಲಿ ಸ್ವಾತಂತ್ರ್ಯಶಕ್ತಿ ಹೇಗೆ ಹುಟ್ಟಿ ಬೆಳೆಯಿತು ಎಂದು ಪರಿಗಣಿಸಬೇಕಾದುದು ಅಗತ್ಯ. ನಾಯಕರ ಕಣ್ಣಲ್ಲಿ ನಾಡನ್ನು ನೋಡುವುದಕ್ಕಿಂತ, ನಾಡಿನ ಕಣ್ಣಲ್ಲಿ ನಾಯಕರನ್ನು ನೋಡುವುದು ವಿವೇಕ. ಈ ದೃಷ್ಟಿ 'ಅಮರ ಆಗಸ್ಟ್' ಕಾದಂಬರಿಯ ವಿಚಾರಧಾರೆಯಾಗಿದೆ.

ಸಾಮಾಜಿಕ ಸಮಸ್ಯೆಗಳನ್ನೂ ಜನಪದದೃಷ್ಟಿಯಿಂದ ನೋಡುವ ಪರಿಪಾಠ ಆರಂಭವಾಗಿದೆ. ಕನ್ನಡದಲ್ಲಿ ಕಾದಂಬರಿ ಪ್ರಕಾರವೇ ಹೊಸದು. ಈ ಪ್ರಾಗತಿಕ ನೋಟವಂತೂ ಇನ್ನೂ ಹೊಸದು. ಆದರೆ ಕನ್ನಡ ಕಾದಂಬರಿ ಯೋಗ್ಯವಾದ ಜಾಡು ಹಿಡಿದು ಮುನ್ನಡೆಯುತ್ತಿದೆಯೆಂದು ಧಾರಾಳವಾಗಿ ಹೇಳಬಹುದು.

ಆಧುನಿಕ ಕನ್ನಡ ಕಾದಂಬರಿ ಜಾನಪದ ವಿಚಾರಸರಣಿಯನ್ನು ರೂಪಿಸುತ್ತಿರುವುದಲ್ಲದೆ ಶತಮಾನಗಳ ದಾಸ್ಯಮನೋಭಾವವನ್ನು ಅಳಿಸಿ ಹಾಕುತ್ತಿದೆ. ಈ ಭಾರತ ಒಂದು ವರ್ಗದ್ದಲ್ಲ, ಒಂದು ಜಾತಿಯದಲ್ಲ, ಒಂದು ಮತದ್ದಲ್ಲವೆಂದು ಸ್ಥಾಪಿಸುವುದರ ಜತೆಗೆ ಈ ಜಗತ್ತು ಯಾವ ವರ್ಗ, ಜಾತಿ ಮತದ ಸೊತ್ತೂ ಅಲ್ಲ ಎಂದು ಸಾರುತ್ತಿದೆ. ಇಂದಿನ ಸಾಹಿತಿ ಪ್ರತಿಪಾದಿಸುತ್ತಿರುವುದು ಅಂತರರಾಷ್ಟ್ರೀಯರಾಷ್ಟ್ರೀಯತೆ. ಪ್ರಾಚೀನ ಭಾರತೀಯರ ಮಾತಿನಲ್ಲಿ ಹೇಳಬೇಕೆಂದರೆ 'ವಿಶ್ವಕುಟುಂಬಿತ್ವ.'

---

# ೭. ಕನ್ನಡ ಕಾದಂಬರಿಯಲ್ಲಿ ವಾಸ್ತವತೆ

ಕನ್ನಡ ಕಾದಂಬರಿಯ ಇತಿಹಾಸ ಕಾಲು ಶತಮಾನದ ಹಿಂದಕ್ಕೆ ಹೋಗುವುದಿಲ್ಲ. ಆದರ ಹಿಂದಿನ ಸುದೀರ್ಘ ಚಂಪೂ, ಷಟ್ಪದಿ, ಸಾಂಗತ್ಯ ಕಾವ್ಯಗಳನ್ನು ಕಾದಂಬರಿಗಳೆಂದು ನಾವು ಪರಿಗ್ರಹಿಸುವುದಾದರೆ ಕನ್ನಡ ಕಾದಂಬರಿಯ ಇತಿಹಾಸವನ್ನು ಆದಿಪಂಪನಿಂದ ಗುರುತಿಸಬೇಕಾಗುತ್ತದೆ. ಆದರಿಂದು, ಕಾದಂಬರಿ ಶಬ್ದವನ್ನು ನಾವು ಒಂದು ವಿಶಿಷ್ಟಾರ್ಥದಲ್ಲಿ ಬಳಸುತ್ತಿದ್ದೇವೆ. ಅದು ಸಮಕಾಲೀನ ಜೀವನಚಿತ್ರ, ಅನುಭವವನ್ನು ಸವಿಸ್ತಾರವಾಗಿ ನಿರೂಪಿಸಬೇಕೆಂದು ಅಪೇಕ್ಷಿಸುತ್ತೇವೆ.

ಭಾರತೀಯ ಜೀವನಕ್ಕೇ ಆದರ್ಶ – ವಾಸ್ತವವೆಂಬ ವಿಂಗಡನೆ ಹೊಸದು. ಕಣ್ಣಿಗೆ ಕಾಣುವುದು ವಾಸ್ತವ, ಕಾಣಬೇಕಾದುದು ಆದರ್ಶ; ಇರುವುದು ವಾಸ್ತವ, ಇರಬೇಕಾದುದು ಆದರ್ಶ ಎಂದು ನಾವು ಸ್ಥೂಲವಾಗಿಟ್ಟು ಕೊಂಡರೆ 'ಇಲ್ಲಿ ಸಲ್ಲುವವರು, ಅಲ್ಲೂ ಸಲ್ಲುವರಯ್ಯ' ಎಂದು ನಂಬಿರುವ ಭಾರತೀಯರು ಇವೆರಡಕ್ಕೆ ವಿಶೇಷ ಭೇದ ಕಲ್ಪಿಸಿದ ಹಾಗೆ ಕಂಡು ಬರುವುದಿಲ್ಲ.

ಆದರೆ ಪರಸಂಸ್ಕೃತಿಗಳ ಘರ್ಷಣೆ, ತಾಡನೆಗಳಿಂದ ನಮ್ಮ ವಿಚಾರ ಲಹರಿಯೂ ನೂತನಮಾರ್ಗ ಆವಿಷ್ಕಾರಮಾಡಿಕೊಳ್ಳಬೇಕಾಯಿತು. ಈ ಮೊದಲು ನಮ್ಮ ಸಾಹಿತ್ಯವನ್ನು ಕರ್ಮದ ವಜ್ರಹಸ್ತ ಆಳಿದಂತೆ ಕಂಡು ಬರುತ್ತದೆ. ಮಾನವನಿಗೂ – ಅದೃಶ್ಯವಾದ ಒಂದು ಮಹಾಶಕ್ತಿಗೂ ನಡೆದ ಹೋರಾಟ, ಆ ಮಹಾಶಕ್ತಿಯ ಸಾಕ್ಷಾತ್ಕಾರಕ್ಕೆ ಮಾನವ ಪಟ್ಟ ಸಾಹಸದ ಕಥೆ ಪ್ರಾಚೀನ ಸಾಹಿತ್ಯದ ಹೆಗ್ಗುರುತು.

ವಿಚಾರವಾದ ಪ್ರಬಲವಾದಮೇಲೆ ಭಾರತೀಯನ ನೋಟ ಬದಲಾಯಿಸಿತು. ಅದೃಶ್ಯವೂ, ಅಗಮ್ಯವೂ ಆದ ಮಹಾಶಕ್ತಿಯೊಂದಿಗೆ ಹೋರಾಡಿದರೆ ಏನು ಪ್ರಯೋಜನ? ಮಾನವ ಮೊದಲು ತನ್ನನ್ನು ತಾನರಿತು ಕೊಳ್ಳಬೇಕು – ತನ್ನ ಪರಿಸ್ಥಿತಿಯನ್ನು, ತನ್ನ ಸುತ್ತುಮುತ್ತಲಿನವರನ್ನು

ಅರ್ಥಮಾಡಿಕೊಳ್ಳಬೇಕು – ತನ್ನ ಸ್ಥಿತಿಗತಿಗೆ ಯಾರು ಕಾರಣರು ಎಂಬುದನ್ನು ಅರಸಬೇಕು ಎಂಬ ವಾದ ಆರಂಭವಾಯಿತು. ಮಾನವ – ಮಾನವನಿಗೆ ಹೆಚ್ಚು ಸಂಬಂಧ ಬೆಳೆಯುವುದಕ್ಕಾರಂಭವಾಯಿತು.

ನಮ್ಮ ಸಾಮಾಜಿಕ ಧರ್ಮದ ಮುಖ ಬದಲಾಯಿಸಿದುದೂ ಒಂದು ಕಾರಣ. ಮಾನವನ ಆತ್ಮಪ್ರಗತಿಯ ಹಂತಗಳನ್ನು ನಿರ್ದೇಶಿಸುತ್ತ ಉಪನಿಷತ್ತು ಅವನನ್ನು 'ಅಹಂ ಬ್ರಹ್ಮಾಸ್ಮಿ' ಎಂಬ ಗುರಿಗೆ ತಂದು ಮುಟ್ಟಿಸಿತು. ಆದರೆ ಉಪನಿಷತ್ತು ಈ ಆದರ್ಶದಲ್ಲಿ ತೃಪ್ತಿ ಹೊಂದಲಿಲ್ಲ. ಅದಕ್ಕೂ ಮುಂದಿನ ಹಂತ ಒಂದಿದೆಯೆಂದು ಖಚಿತವಾಗಿ ಹೇಳಿತು. 'ಸರ್ವಂ ಖಲ್ವಿದಂ ಬ್ರಹ್ಮ'. ವ್ಯಕ್ತಿ ತಾನು ಬ್ರಹ್ಮನಾದೆನೆಂದು ತಿಳಿದರೆ ಸಾಲದು. ತನ್ನಂತೆ ಸಮಸ್ತ ಜೀವಕೋಟಿಯೂ ಬ್ರಹ್ಮಸ್ವರೂಪ ಎಂದು ತಿಳಿಯಬೇಕು.

ಸಮಷ್ಟಿವಾದ ಭಾರತೀಯ ಜೀವನಕ್ಕೆ ಹೊಸದಲ್ಲ. ಆದರೆ ಅನಂತ ಆದರ್ಶಗಳ ಹೋರಾಟದಲ್ಲಿ ಅದರ ಬೆಳಕು ಸ್ವಲ್ಪ ಮಸುಕಾಗಿತ್ತು. ಪರ ಸಂಸ್ಕೃತಿಗಳ ಘರ್ಷಣೆ ಈ ಕಡೆಗೆ ಭಾರತೀಯನ ಲಕ್ಷ್ಯವನ್ನು ಸೆಳೆಯಿತು. ಫ್ರಾನ್ಸ್ ಇತ್ತಕಡೆ ಹತ್ತೊಂಭತ್ತನೆಯ ಶತಮಾನದ ಆರಂಭದ ದಶಕಗಳಲ್ಲಿ ಕಣ್ಣು ಹೊರಳಿಸಿದ್ದರೆ ಕರ್ನಾಟಕ ಒಂದು ಶತಮಾನಾನಂತರ ಕಣ್ಣು ಹೊರಳಿಸುವಂತಾಯಿತು. ಸಮಷ್ಟಿವಾದದ ಸಾಹಿತ್ಯರೂಪವೇ ಕಾದಂಬರಿ.

ವಾಸ್ತವ ಸಾಹಿತ್ಯ ಬಗೆಬಗೆಯ ವಿಮರ್ಶೆಗೊಳಗಾಗಿದೆ. ಅದರ ಮೇಲೆ ತಡೆಯಿಲ್ಲದಷ್ಟು ಭರ್ತ್ಸನೆಯೂ ಆಗಿದೆ. ಜಾರ್ಜ್ ಸೇಂಟ್ಸ್‌ಬರಿ 'ಹೇಳಬಾರದುದನ್ನು ಆದಷ್ಟು ಸ್ಪಷ್ಟವಾಗಿ ವಿವರವಾಗಿ ಹೇಳುವುದೇ ವಾಸ್ತವ ಸಾಹಿತ್ಯದ ಗುರಿ' ಎಂದು ಹೇಳುತ್ತಾನೆ. ವಾಸ್ತವ ಸಾಹಿತ್ಯ ಫ್ರಾನ್ಸಿನಲ್ಲಿ ಆರಂಭವಾದ ಕಾಲದಲ್ಲಿ ಬಂದ ಮೋಪಸಾ, ಜ಼ೋಲಾ, ಫ್ಲಾಬೋ ಶೀಲಪ್ರಶ್ನೆಯನ್ನು ಎತ್ತಿಕೊಂಡು ಸ್ಪಷ್ಟವಾಗಿ ಪೃಥಃಕ್ಕರಿಸಿದುದರಿಂದ ವಾಸ್ತವ ಸಾಹಿತ್ಯವೆಂದರೆ ಅಶ್ಲೀಲ ಸಾಹಿತ್ಯವೆಂಬ ಹೆಸರು ಅದಕ್ಕೆ ಬಂದಿತು. ವಾಸ್ತವ ಸಾಹಿತ್ಯದ ವ್ಯಾಪ್ತಿ ಕೇವಲ ಶೀಲಾಶ್ಲೀಲಗಳ ಪ್ರಶ್ನೆಯಲ್ಲಿಯೇ ಉಳಿಯಲಿಲ್ಲ. ಜೀವನದ ಸಮಸ್ತ ವ್ಯಾಪಾರವನ್ನೂ ಕಾದಂಬರಿಕಾರ ಕಂಡಂತೆ ವಿವರಿಸತೊಡಗಿದ. ಪರಂಪರೆಯ ಪ್ರಾಬಲ್ಯದಿಂದಲೋ, ಧನವಂತರ ಪ್ರಭಾವದಿಂದಲೋ ತಲೆದೋರಿದ್ದ ಸಮಸ್ಯೆಗಳನ್ನು ಸಮಸ್ತ ಜನತೆಯ ಹಿತದೃಷ್ಟಿಯಿಂದ

ಪುನರ್ವಿಮರ್ಶೆ ಮಾಡತೊಡಗಿದ. ಇದು ಸಂಪ್ರದಾಯಪ್ರಿಯರನ್ನೂ, ಧನ ದಾಸರನ್ನೂ ಕೆರಳಿಸಿದುದರಲ್ಲಿ ಏನಾಶ್ಚರ್ಯ?

ಸಂಪ್ರದಾಯ ಸಾಹಿತ್ಯ ಒಂದು ಕೃತಕ ಪ್ರಪಂಚದಲ್ಲಿ ಓಲಾಡಿತು. ಜೀವನವೆಲ್ಲಾ ಅರಮನೆಗಳು, ರಾಣಿಯರು, ಗಾನಜಾಣೆಯರಿಂದ ತುಂಬಿತ್ತು. ಚಂಪಕ ಮಲ್ಲಿಕಾ ಕುಸುಮಗಳಿಂದ ತುಂಬಿರುವ ಚಿತ್ರ ಅವುಗಳಲ್ಲಿ ಕಂಡುಬಂತು. ವಾಸ್ತವಜೀವನದ ರಾಕ್ಷಸವ್ಯಾಪಾರ ಅದಕ್ಕೆ ಬೇಡವಾಯಿತು. 'ಜೀವನದಲ್ಲಿ ಸಾಕಷ್ಟು ದುಃಖ, ನೋವು, ಹಿಂಸೆ ತುಂಬಿದೆ. ಸಾಹಿತ್ಯದಲ್ಲಿಯೂ ಅದನ್ನು ತರುವುದೇಕೆ? – ಸಾಹಿತ್ಯ ಕ್ಷಣಕಾಲವಾದರೂ ಜೀವನದ ದುರ್ಭರತೆಯನ್ನು ಹೋಗಲಾಡಿಸಿ ಮನಸ್ಸಿಗೆ ಮುದವೀಯಬೇಕು' ಎನ್ನುವ ತತ್ತ್ವದ ಪ್ರತಿಪಾದನೆ ಸಂಪ್ರದಾಯ ಸಾಹಿತ್ಯದಲ್ಲಿ ಕಂಡುಬಂತು. 'ಮಾನವ ಸೌಂದರ್ಯಾಭಿಮುಖ ನಾಗಬೇಕು – ಸೌಂದರ್ಯವೇ ಜೀವನದರ್ಶನ' ಎನ್ನುವುದು ಸಂಪ್ರದಾಯದ ವಾದ.

ಲಾಕ್ಷಣಿಕರು ದುರಂತ ಚಿತ್ರಗಳನ್ನು ಸಾಹಿತ್ಯದಲ್ಲಿ ಒಡಮೂಡಿಸುವುದಕ್ಕೆ ಅಸಮ್ಮತಿ ಸೂಚಿಸಿದರು. ಶುಷ್ಕಲಾಕ್ಷಣಿಕ ಪ್ರೇಯಸ್ಸಿನ ದಾರಿ ಹಿಡಿದನೇ ವಿನಾ ಶ್ರೇಯಸ್ಸಿನ ದಾರಿ ಹಿಡಿಯಲಿಲ್ಲ. ಸಾಹಿತ್ಯ ನಿಲ್ಲಬೇಕಾದುದು ಸತ್ಯದ ಭದ್ರವಾದ ಬುನಾದಿಯ ಮೇಲೆ. ಪ್ರತಿ ಮಾನವನ ಜೀವನವೂ ಸುರ ಸುಂದರಿಯರಿಂದ ತುಂಬಿರುವುದಿಲ್ಲವೆಂಬುದನ್ನು ಎಳೆಯ ಮಗುವೂ ಬಲ್ಲುದು. ವಾಸ್ತವ ಜೀವನದಲ್ಲಿ ಕಾಪಟ್ಯ, ಕ್ರೌರ್ಯ, ಸ್ವಾರ್ಥ ತುಂಬಿದ್ದರೆ ಅದನ್ನು ಬಿಚ್ಚಿ ತೋರುವುದಕ್ಕೆ ಕ್ರಿಯಾಶಾಲಿಯಾದ ಕವಿಯೇತಕ್ಕೆ ಅಂಜಬೇಕು? ಸತ್ಯದ ಸರಿಯಾದ ಕಲ್ಪನೆ ಬಾರದೆ ಅನೇಕ ಸಲ ಹಲವು ಕ್ರೂರ ಆಚಾರ ವ್ಯವಹಾರಗಳು ರೂಢಿಗೆ ಬಂದಿರುತ್ತವೆ. ಕವಿ ಅತ್ತಕಡೆಗೆ ಮಾನವನ ಗಮನಸೆಳೆದು ಅವನ ಬಾಳಿಗೆ ಋಜುಮಾರ್ಗವನ್ನು ಕಲ್ಪಿಸಿಕೊಡಬೇಕಲ್ಲವೇ?

ಜೀವನದ ಅಗಡುತನವನ್ನೂ ಸಾಹಿತ್ಯದಲ್ಲೇತಕ್ಕೆ ತರಬೇಕೆಂಬುದರ ಬಗ್ಗೆ ರೋಜರ್ ಫ್ರೈ ಬಹಳ ಸ್ವಾರಸ್ಯವಾದ ವಾದ ಹೂಡಿದ್ದಾರೆ. 'ತಾತ್ಕಾಲಿಕ ಕ್ರಿಯೆಯಿಂದ ಯಾವ ರಸ – ಭಾವ ದೂರ ನಿಲ್ಲುತ್ತದೆಯೋ ಅದು ವಿಚಾರದಿಂದ ಪರಿಶುದ್ಧಿಗೊಂಡು ಸುಂದರವಾಗುತ್ತದೆ. ಮತ್ತು ಹೆಚ್ಚು ವಿಶಾಲವಾಗಿಯೂ ಆಳವಾಗಿಯೂ ಸತ್ಯವನ್ನು ಪರಾಮರ್ಶಿಸುತ್ತದೆ. ಅನೇಕರ

ಅನುಭವ ಕವಿಯ ಮನಸ್ಸಿನ ಕುಂದಣದಲ್ಲಿ ಬೆಂದು ಬರುವುದರಿಂದ ಅವುಗಳ ಸ್ವರೂಪ ಸುಸ್ಪಷ್ಟವಾಗುತ್ತದೆ.'

ಇನ್ನು ಸೌಂದರ್ಯವಾದ. ಸ್ಥೂಲವಾದ ಕಣ್ಣುಗಳಿಗೆ ಕಾಣುವ ಸೌಂದರ್ಯಕ್ಕೂ, ಮನಸ್ಸಿನ ಕಣ್ಣುಗಳಿಗೆ ಕಾಣುವ ಸೌಂದರ್ಯಕ್ಕೂ ವಿಶೇಷ ಅಂತರವಿದೆ. ಕಣ್ಣು ಬಯಸುವುದು ಚಾಪಲ್ಯಪೂರಣ, ಮನಸ್ಸು ಬಯಸುವುದು ಪರಿಶುದ್ಧ ಉಲ್ಲಾಸ. ನಯನ ಮನೋಹರವಾಗಿರದ ವ್ಯಕ್ತಿಯೂ ತನ್ನ ಗುಣ ಶೀಲಗಳಿಂದ ಸುಂದರನಾಗುತ್ತಾನೆ. ಕ್ರಿಯಶಾಲಿಯಾದ ಕವಿ ಸ್ಥೂಲ ನೋಟದಿಂದ ತೃಪ್ತನಾಗುವುದಿಲ್ಲ. ಜೀವನದ ಒಳಹೊಕ್ಕು ನಿಜವಾದ ಸೌಂದರ್ಯ ಎಲ್ಲಿದೆಯೆಂದು ಅರಸುತ್ತಾನೆ. ಬಡವನ ಗುಡಿಸಲಲ್ಲಿ, ಹಣತೆಯ ಬೆಳಕಿನಲ್ಲಿ, ದಾರಿದ್ರ್ಯದ ಬಳಿಯಲ್ಲಿ ಸೌಂದರ್ಯವಿರಬಾರದೇ ? ಮಾನವನ ಋಜುಬಾಳ್ವೆಯೇ ಸತ್ಯ ಸೌಂದರ್ಯದ ಸೋಪಾನವೆಂದು ವಾಸ್ತವ ಸಾಹಿತಿ ನಂಬುತ್ತಾನೆ.

ವಾಸ್ತವ ಸಾಹಿತ್ಯದ ಸ್ವರೂಪವನ್ನು ಲಡ್ವಿಗ್ ಲುಯಿಸೋನ್ ಇಂತು ಕ್ರೋಢೀಕರಿಸುತ್ತಾನೆ.

"....We see with increasing clearness that the mood of naturalism....is inspired by a resistance against delusion and vain sentimentality against mere decorum and mean propriety, and that it is inspired, invariably inspired, by moral ardor. It has constantly the ardor for truth; it has almost as constantly the note of human compassion; its desire to enlarge the field and subject matter of art is almost always guided....by the belief in human brotherhood, by tenderness for the disinherited of the social order. It is as selective as any other mood or method. For art is selection. But it selects under a principle of choice which is consciously

and emphatically moral. All sound art is.... moral in its inherant character. Naturalistic art is preeminently and burningly moral by the very character of its motive and inspiration"

ಕನ್ನಡ ಸಾಹಿತ್ಯಕ್ಕೆ ವಾಸ್ತವತೆ ಹೊಸದೆಂದು ಈ ಮೊದಲೇ ಹೇಳಿದ್ದೇನೆ. ಕಾದಂಬರಿ ಇತ್ತೀಚೆಗೆ ಸಾಹಿತ್ಯಮಂಟಪದಲ್ಲಿ ಅವತರಿಸಿದುದರಿಂದ ಅದರಲ್ಲಿ ಆದರ್ಶವಾದ – ವಾಸ್ತವವಾದವನ್ನು ವಿಂಗಡಿಸುವುದು ಕಷ್ಟಸಾಧ್ಯ. ಗುಣ, ಸಂಖ್ಯೆ ಎರಡು ಪ್ರಮಾಣಗಳಿಂದಲೂ ಕನ್ನಡಕಾದಂಬರಿ ಬೆಳೆದಾಗ ಈ ಕೆಲಸ ಸಾಧ್ಯವಾಗಬಹುದು.

ಸದ್ಯದ ಬೆಳವಳಿಗೆಯನ್ನು ಲಕ್ಷಿಸಿ, ವಾಸ್ತವವಾದವನ್ನು ಕನ್ನಡ ಕಾದಂಬರಿ ಪ್ರಪಂಚ ಎಷ್ಟರಮಟ್ಟಿಗೆ ಅರ್ಥಮಾಡಿಕೊಂಡಿದೆಯೆಂದು ವಿಚಾರ ಮಾಡಬಹುದು. ಕಾದಂಬರಿ ಪ್ರಕಾರದಲ್ಲಿ ಕನ್ನಡಕ್ಕೆ ಪರಂಪರೆಯ ಬೆಂಬಲವಿಲ್ಲದಿರುವುದು ಕೆಲವು ದೃಷ್ಟಿಯಲ್ಲಿ ಕೊರತೆಯಾಗಿ ಕಂಡುಬಂದರೂ ಒಂದು ದೃಷ್ಟಿಯಿಂದ ಅದು ಸಹಾಯಕವಾಗಿದೆಯೆನ್ನಬಹುದು. ಪರಂಪರೆಯ ನೊಗದ ಭಾರವಿಲ್ಲದೆ ಕಾದಂಬರಿಕಾರ ತನ್ನ ಮಾರ್ಗ ತಾನು ಆವಿಷ್ಕಾರಮಾಡಿಕೊಳ್ಳಬಹುದು. ಅದರಲ್ಲಿ ಚಿರಂತನ ಗುಣಗಳಿದ್ದರೆ ಅದು ಅವಿನಾಶಿಯಾಗುವುದು ಮಾತ್ರವಲ್ಲದೆ, ಅದೇ ಒಂದು ನೂತನ ಪರಂಪರೆಗೆ ಅಡಿಗಲ್ಲು ಹಾಕಬಹುದು.

ಆಧುನಿಕ ಕನ್ನಡ ಕಾದಂಬರಿಗಳಲ್ಲಿ ಎಂ. ಎಸ್. ಪುಟ್ಟಣ್ಣನವರ 'ಮಾಡಿದ್ದುಣ್ಣೋ ಮಾರಾಯ' ಕಾದಂಬರಿಯನ್ನು ಮೊದಲನೆಯದಾಗಿ ಪರಿಗಣಿಸಬಹುದು. ೧೯೧೫ ರಲ್ಲಿ ಅದನ್ನು ಪ್ರಕಟಿಸುತ್ತಾ ಮುನ್ನುಡಿಯಲ್ಲಿ ಕಾದಂಬರಿಕಾರರು ಹೀಗೆ ಹೇಳಿದ್ದಾರೆ

"....ನಿರ್ಮಲಮೂರ್ತಿಗಳಾದ ಶ್ರೀರಾಮ, ಸೀತಾದೇವಿ, ಯುಧಿಷ್ಠಿರ, ದ್ರೌಪತಿ, ಇವರುಗಳ ಗುಣಗಳಲ್ಲಿ ಕೆಲವು ಭಾಗವನ್ನು ಹೊಂದಿ, ಲೋಕದ ಲತಾಡಿಗೆ ಸಿಕ್ಕಿ ಕಷ್ಟಕ್ಕೆ ಗುರಿಯಾದರೂ ತಮ್ಮ ಧೀರೋದಾತ್ತ ಗುಣಗಳನ್ನು ಬಿಡದೆ ಇರತಕ್ಕ ಪಾತ್ರಗಳನ್ನು ಮನುಷ್ಯಮಾತ್ರದವರಲ್ಲಿ ಆರಿಸಿಕೊಂಡೋ ಊಹಿಸಿಕೊಂಡೋ ವರ್ಣಿಸುವುದು ಮನಸ್ಸನ್ನು ಚೆನ್ನಾಗಿ ಆಕರ್ಷಣಮಾಡು

ವುದರಲ್ಲಿ ಸಂಶಯವಿಲ್ಲ. ಪುರಾಣಪ್ರಸಿದ್ಧರು ವ್ಯಾಕರಣ ಸೂತ್ರಗಳಾಗಿದಾರೆ. ಮನುಷ್ಯ ಸಾಮಾನ್ಯರಲ್ಲಿ ಸಿಕ್ಕುವ ಧೀರರು ಉದಾಹರಣೆಗಳಾಗಿದಾರೆ."

ಮಾನವ ಯಾವದನ್ನು ಹಿರಿಯಗುಣವೆಂದು ಭಾವಿಸುತ್ತಾನೋ ಅದನ್ನು ಕೇವಲ ಪೌರಾಣಿಕ ವ್ಯಕ್ತಿಗಳಲ್ಲಿ ಕಂಡು ಸುಖಿಸುವುದಕ್ಕಿಂತ ನಿತ್ಯ ಜೀವನದ ಸಾಮಾನ್ಯ ವ್ಯಕ್ತಿಗಳಲ್ಲಿ ಆ ಗುಣಗಳು ಮೂಡಿರುವುದನ್ನು ಕಾಣಬೇಕೆಂದು ಪುಟ್ಟಣ್ಣನವರು ಹೇಳಿದ್ದಾರೆ. ಜೀವನ ಸೌಂದರ್ಯವನ್ನು ಗಮನಿಸುವುದರ ಜತೆಗೆ ಅದರ ಅಗಡುತನವನ್ನು ತಮ್ಮ ಕಾದಂಬರಿಯಲ್ಲಿ ಗಮನಿಸಿದ್ದಾರೆ. ಮಾನವನ ಬಾಳ್ವೆ ಕೇವಲ ಹಿರಿಯ ಗುಣಗಳ ಮುದ್ದೆಯಲ್ಲ; ಅಥವಾ ಲೋಪದೋಷಗಳ ರಸಾಯನವಲ್ಲ. ಬಹಳ ಹಿರಿಯರೆಂದು ನಾವು ಭಾವಿಸುವವರಲ್ಲಿ ಸಣ್ಣಪುಟ್ಟ ದೋಷಗಳು, ಬಹಳ ನೀಚರೆಂದು ನಾವು ಭಾವಿಸುವವರಲ್ಲಿ ಅನೇಕ ಸದ್ಗುಣಗಳೂ ಮೂಡಿರುತ್ತವೆ. 'ನನ್ನನ್ನು ಸರಿಯಾಗಿ ಅರ್ಥಮಾಡಿಕೊಳ್ಳಬಲ್ಲೆಯಾ?' ಎಂದು ನಿಸರ್ಗ ಸದಾ ಮಾನವನನ್ನು ಏಡಿಸಿ ಕೇಳುತ್ತಿರುತ್ತದೆ.

ಆದರೆ ವಾಸ್ತವ ಕಾದಂಬರಿಕಾರನ ಕರ್ತವ್ಯ ಜೀವನ ಚಿತ್ರಣದಲ್ಲಿ ಮುಗಿಯುವುದಿಲ್ಲ. ಪ್ರಾಯಶಃ ಆ ಕೆಲಸವನ್ನು ಅವನಿಗಿಂತ ಹೆಚ್ಚು ದಕ್ಷತೆಯಿಂದ ಇತಿಹಾಸಕಾರ, ಫೋಟೋಯಂತ್ರ ಮಾಡಬಹುದು. ಒಂದೇ ವರ್ಷದ ಬಾಳುವೆಯ ಸಮಗ್ರ ಚಿತ್ರವನ್ನು, ಕೂಲಂಕಷವಾಗಿ ಕಾದಂಬರಿಕಾರ ಕೊಡಬೇಕಾದರೆ ಹಲವು ಸಂಪುಟಗಳನ್ನು ಬರೆಯಬೇಕಾಗಬಹುದು. ಇಂಥ ಬರವಣಿಗೆ ನೀರಸ ವಿಷಯಗಳ ಕಂತೆಯಾಗುತ್ತದೆ. ನಾವು ನಮ್ಮ ಬಾಳಿನ ವರದಿಯನ್ನು ಕಾದಂಬರಿಕಾರನಿಂದ ನಿರೀಕ್ಷಿಸುವುದಿಲ್ಲ. ಕಾದಂಬರಿಕಾರ ಈ ಘಟನೆಗಳ ಹಿಂದಣ ಮನೋಭಾವ, ಕ್ರತುಶಕ್ತಿ, ಉದ್ದೇಶ, ನಿಮಿತ್ತಗಳನ್ನು ಗಮನಿಸಿ ವಿವರಿಸುತ್ತಾನೆ. ಈ ಹಿರಿಯ ಗುಣದಿಂದಲೇ ಅವನು ಕ್ರಿಯಾಶಾಲಿಯಾಗುವುದು. ಸಹಜ ಜೀವನವನ್ನು ಚಿತ್ರಿಸುವುದರ ಜತೆಗೆ ಅವನು ನಮಗೆ ಅರಿವಾಗದಂತೆ ಅದರ ವ್ಯಾಖ್ಯಾನವನ್ನೂ ಮಾಡಿರುತ್ತಾನೆ. ಈ ವ್ಯಾಖ್ಯಾನ ಶಕ್ತಿ, ವಿಮರ್ಶಾನೈಪುಣ್ಯ ಅವನಿಗೆ ಎಷ್ಟು ಸಾಧಿಸಿದೆಯೆನ್ನುವುದರ ಮೇಲೆ ಅವನ ಪ್ರತಿಭೆಯನ್ನು ನಾವು ಅಳೆಯಬೇಕಾಗುತ್ತದೆ.

ಕಳೆದ ದಶಕದಲ್ಲಿ ಕನ್ನಡ ಕಾದಂಬರಿ ಬಹುಮುಖವಾಗಿ ಬೆಳೆಯಿತು. ವೆಂಕಟಾಚಾರ್ಯರು ಮತ್ತು ಗಳಗನಾಥರ ಧೀರೋದಾತ್ತ, ಪುಣ್ಯಶೀಲ ನಾಯಕ ನಾಯಿಕೆಯರನ್ನು ಮಾತ್ರ ಕಂಡಿದ್ದ ಕನ್ನಡ ಓದುಗರು ತಮ್ಮನ್ನು ತಾವು ಕಾಣಲಾರಂಭಿಸಿದರು. ತಾವು ನಿತ್ಯ ಆಚರಿಸುತ್ತಿದ್ದ ನಡೆವಳಿಕೆಗೆ ಇಷ್ಟು ಅರ್ಥ – ಇಷ್ಟು ಉತ್ತರವಾದಿತನವಿದೆಯೆಂಬ ಅರಿವು ಓದುಗರಿಗಾಗ ಲಾರಂಭಿಸಿತು. ಪುಟ್ಟಪ್ಪನವರು ಹೇಳುವಂತೆ 'ಕಾದಂಬರಿ ಕರತಲ ರಂಗಭೂಮಿ ; ಅಂಗೈಮೇಲಣ ನಾಟಕಶಾಲೆ. ಆದ್ದರಿಂದ ಕಾದಂಬರಿಯನ್ನು ಓದುವ ವಾಚಕರು ನಾಟಕವನ್ನು ನೋಡುವ ಪ್ರೇಕ್ಷಕರೂ ಆಗಬೇಕಾಗು ತ್ತದೆ.' ವಾಚಕರು ಪ್ರೇಕ್ಷಕರಾಗುವುದು ಮಾತ್ರವೇ ಅಲ್ಲ, ಅವರೇ ನಾಟಕ ವನ್ನಾಡುವ ನಟರೂ ಆಗುತ್ತಾರೆ.

ಆಧುನಿಕ ಕನ್ನಡ ಕಾದಂಬರಿಗಳ ಬೆಳವಳಿಗೆಯ ಕೆಲವು ಹೆಗ್ಗುರುತು ಗಳನ್ನು ನಾವು ಲಕ್ಷಿಸಬಹುದು :

೧) ಸಾಮಾಜಿಕ ಜೀವನ: ಕನ್ನಡನಾಡು ಬಗೆಬಗೆಯ ಜನತೆಯ, ಆಚಾರ ವ್ಯವಹಾರದ, ರೀತಿನೀತಿಗಳ ಗಣಿಯಾಗಿದೆ. ಕ್ರಿಯಾಶಾಲಿಯಾದ ಕಾದಂಬರಿಕಾರ ಕನ್ನಡನಾಡಿನ ಯಾವ ಮೂಲೆಯ ಹಳ್ಳಿಯನ್ನು ಆಶ್ರಯಿಸಿದರೂ ಸಾಕು. ಅವನಿಗಲ್ಲಿ ವಿಪುಲವಾದ ಸಾಮಗ್ರಿ ದೊರೆಯುತ್ತದೆ. ಜನ ಕನ್ನಡದ ಬೇರೆಬೇರೆ ಪ್ರಕಾರಗಳನ್ನು ಚಿತ್ರವಿಚಿತ್ರ ರೀತಿಯಲ್ಲಿ ಮಾತನಾಡುತ್ತಾರೆ. ಮೈಸೂರು ಕಡೆಯ ಮಲೆನಾಡು ಜೀವನಚಿತ್ರ 'ಕಾನೂರು ಸುಬ್ಬಮ್ಮ ಹೆಗ್ಗಡತಿ'ಯಲ್ಲಿ, ಹಳ್ಳಿಗರ ಜೀವನ 'ಮಂಗಳ ಸೂತ್ರ', 'ಸರ್ವ ಮಂಗಳಾ' ಕಾದಂಬರಿಗಳಲ್ಲಿ ಉತ್ತರ ಕರ್ನಾಟಕದ ಹಳ್ಳಿಯ ಜೀವನ 'ನಿಸರ್ಗ'ದಲ್ಲಿ, ದಕ್ಷಿಣ ಕನ್ನಡ ಜಿಲ್ಲೆಯ ಬಡವರ ಬಾಳು 'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ಚಿತ್ರಿತವಾಗಿವೆ.

೨) ಸಾಮಾಜಿಕ ಸಮಸ್ಯೆಗಳು: ಕನ್ನಡನಾಡಿನ ಜನಜೀವನ ಎಷ್ಟು ವಿಶಾಲವಾಗಿ ರಸವತ್ತಾಗಿದೆಯೋ ಅಷ್ಟೇ ವಿಪುಲವಾಗಿದೆ ಅದರ ಜನತೆಯ ಸಮಸ್ಯೆಗಳು. ಅಸ್ಪೃಶ್ಯತೆಯ ವಿಷಯವನ್ನೆತ್ತಿಕೊಂಡ 'ಚೋಮನ ದುಡಿ', ಗಂಡು ಹೆಣ್ಣಿನ ಸಮಸ್ಯೆಯನ್ನು ವಿವೇಚಿಸಿರುವ 'ಇಜ್ಜೋಡು', 'ವೇಶ್ಯಾ ವೃತ್ತಿ'ಯ ಸಮಸ್ಯೆಯನ್ನೆದುರಿಸಿರುವ 'ಜೀವನ ಯಾತ್ರೆ', 'ನಗ್ನಸತ್ಯ',

'ಶನಿಸಂತಾನ,' 'ಸೂಳೆಯ ಸಂಸಾರ' ಶ್ರಮಜೀವಿಗಳ ಪರಿಚಯ ಮಾಡಿ ಕೊಡುವ 'ಜೀತದ ಜೀವ', 'ಸಾಹಿತ್ಯರತ್ನ', 'ಜ್ವಾಲಾಮುಖಿಯ ಮೇಲೆ' ಅನ್ನದ ಹಾಹಾಕಾರವನ್ನು ಚಿತ್ರಿಸಿರುವ 'ಅನ್ನ' ಕಾದಂಬರಿಗಳು ಗಮನಾರ್ಹ ವಾಗಿವೆ.

೩) ರಾಜಕೀಯ ಜೀವನ: ಈ ದಶಕದಲ್ಲಿ ಭಾರತಾದ್ಯಂತವಾದಂತೆ ಕನ್ನಡನಾಡಿನಲ್ಲೂ ವಿಶೇಷ ರಾಜಕೀಯಜಾಗೃತಿಯಾಗಿದೆ. ಹಳೆಯ ಪ್ರಪಂಚದೆಡೆಯಲ್ಲಿ ಹೊಸ ಪ್ರಪಂಚ ಕಾಲಿಡುತ್ತಿದೆ. ಈ ಸಂಧಿಕಾಲದಲ್ಲಿ ನಮ್ಮ ಇಡಿಯ ಜೀವನ ತಲೆಕೆಳಗಾಗಿದೆ. ಸ್ವಾತಂತ್ರ್ಯಕ್ಕೆ ನಮ್ಮ ಹೋರಾಟ, ಆಗಸ್ಟ್ ಪ್ರಕರಣ, ಸ್ವಾತಂತ್ರ್ಯ ಬಂದಮೇಲೆ ಒದಗಿದ ಪರಿಸ್ಥಿತಿಗಳನ್ನು 'ರಾಷ್ಟ್ರಪುರುಷ', 'ಮೆರವಣಿಗೆ', 'ರಕ್ತತರ್ಪಣ', 'ಹೊಸಲು ದಾಟಿದ ಹೆಣ್ಣು' 'ಅಮರ ಆಗಸ್ಟ್' ಕಾದಂಬರಿಗಳು ಚರ್ಚಿಸಿವೆ.

೪) ಕಲೆ: ಸಾಮಾಜಿಕ ಜೀವನದಲ್ಲಿ ಕಲಾವಿದ ಅಪರೂಪ ವ್ಯಕ್ತಿ. ಅವನು ತನ್ನ ಕೃತಿಗಳ ಮೂಲಕ ನೂರಾರು ಪ್ರಪಂಚಗಳನ್ನು ಸೃಷ್ಟಿಮಾಡು ವಂತೆ, ತನಗಾಗಿಯೂ ಒಂದು ಪ್ರಪಂಚವನ್ನು ಸೃಷ್ಟಿ ಮಾಡಿಕೊಂಡಿರುತ್ತಾನೆ. ಆದರೆ ಅವನ ಪ್ರಪಂಚಕ್ಕೂ ನಿತ್ಯ ಪ್ರಪಂಚಕ್ಕೂ ಅವಿಚ್ಛಿನ್ನ ಹೋರಾಟ ಸಾಗಿರುತ್ತದೆ. ಅವನ ಪ್ರಪಂಚದಲ್ಲಿ ಕ್ರಮವಿಲ್ಲ – ರೀತಿಯಿಲ್ಲ – ನೀತಿಯಿಲ್ಲ ಎಂದು ಸಂಪ್ರದಾಯ ಭಾವಿಸುವುದು ಸಹಜ. ಆದರೆ ಅವನು ತನ್ನ ಪ್ರಪಂಚ ಸಾಗುವುದಕ್ಕೆ ಬೇಕಾದ ನೀತಿ ನಿಯಮಗಳನ್ನು ನಿರ್ಮಾಣಮಾಡಿಕೊಂಡಿರು ತ್ತಾನೆ. 'ಸಂಧ್ಯಾರಾಗ', 'ಉದಯರಾಗ', 'ಮೋಗ ಪಡೆದ ಮನ', 'ಹರಿದಗೆಜ್ಜೆ', 'ನಟ ಸಾರ್ವಭೌಮ' ಇಂಥ ಬಾಳನ್ನು ಚಿತ್ರಿಸುತ್ತವೆ.

ಆಧುನಿಕ ಕನ್ನಡದ ವಾಸ್ತವ ಕಾದಂಬರಿಯ ವಿಚಾರವಾಹಿನಿ ಈ ರೀತಿಯಾಗಿದೆ:

೧) ಅನುಕಂಪ: ಮಾನವನ ಸಹಜ ಶಕ್ತಿಯನ್ನು ಚಿತ್ರಿಸುವುದು ಹೇಗೆ ಕಾದಂಬರಿಕಾರನ ಗುರುತರ ಜವಾಬ್ದಾರಿಯೇ ಹಾಗೆ ಅವನ ದೌರ್ಬಲ್ಯವನ್ನೂ ಚಿತ್ರಿಸುವುದು ಅವನ ಕರ್ತವ್ಯ. ಆದರೀ ಚಿತ್ರಣದಲ್ಲಿ ಸಹಾನುಭೂತಿಯಿರಬೇಕು. 'ನಾನು ನ್ಯಾಯವಿಮರ್ಶೆಗೆ ಕೂಡುವುದಕ್ಕೆ ಬಂದಿಲ್ಲ – ಸಹಾನುಭೂತಿ ವ್ಯಕ್ತಮಾಡಲು ಬಂದಿದ್ದೇನೆ' ಎಂದು ಸಾರಿ

ಹೇಳಿದ ಯೇಸುಕ್ರಿಸ್ತನ ಮಾತಿನಲ್ಲಿ ಜೀವನರಹಸ್ಯ ಅಡಕವಾಗಿದೆ. ಅದರ ಆಚರಣೆಯನ್ನು ಕನ್ನಡ ವಾಸ್ತವ ಕಾದಂಬರಿಯಲ್ಲಿ ಕಾಣಬಹುದು.

೨) ಪುನರ್ವಿಮರ್ಶೆ : ಪರಂಪರೆ ಬೇಕೆಂದೂ, ಸಂಪ್ರದಾಯ ಆವಶ್ಯಕವೆಂದೂ ಕಾದಂಬರಿಕಾರ ಒಪ್ಪಿಕೊಳ್ಳುತ್ತಾನೆ. ಆದರೆ ಪರಂಪರೆ, ಸಂಪ್ರದಾಯ ಪ್ರಗತಿಗೆ ಪ್ರಚೋದಕಗಳಾಗಬೇಕು. ಬಡಎತ್ತಿನ ಮೇಲೆ ಹೇರುವ ಮಣಭಾರದ ನೊಗವಾಗಬಾರದು. ಬಾಳು ಬದಲಾಯಿಸುವಂತೆ ಸಂಪ್ರದಾಯವೂ ಬದಲಾಯಿಸಬೇಕು. ಜೀವನ ಜೆಲ್ಲದ ಅಚ್ಚಲ್ಲ. ಅದಕ್ಕೆ ಏರಿಳಿತಗಳಿವೆ. ಜೀವನ ಮಾರ್ಪಾಡಾದಂತೆ ಅದರ ಕಟ್ಟುಕಾಯಿದೆಗಳೂ ಮಾರ್ಪಾಡಾಗುತ್ತಾ ಹೋಗಬೇಕು.

೩) ಸಾಮ್ಯವಾದ : ಸಾಮ್ಯವಾದ ಭಾರತಕ್ಕೆ ಕಾರ್ಲ್‌ಮಾರ್ಕ್ಸ್‌ನ ತತ್ತ್ವದಿಂದ ರಷ್ಯಾದ ಮಾರ್ಗವಾಗಿ ಬಂದಿತೆಂದು ಜನ ತಪ್ಪು ತಿಳಿದಿದ್ದಾರೆ. ಅಂಥವರು 'ಆರಣ್ಯಕ'ಗಳನ್ನು ಸ್ವಲ್ಪ ನೋಡಬೇಕು. ಭಾರತ ತನ್ನ ಸಮಾಜವನ್ನು ಕಟ್ಟಿದ್ದೇ ಸಾಮ್ಯವಾದದ ತಳಹದಿಯ ಮೇಲೆ. ಇಂದು ಕನ್ನಡ ಕಾದಂಬರಿಕಾರ ಸಾಮ್ಯವಾದಿಯಾಗಿರುವುದು ಈ ಹಿರಿಯ ಪರಂಪರೆಯ ಪ್ರವರ್ತಕನಾಗಿ. ಮಾರ್ಕ್ಸ್‌ವಾದ ಉಪನಿಷತ್ತಿನ ತತ್ತ್ವವನ್ನು ನೆನಪಿಗೆ ತಂದುಕೊಟ್ಟಿತು. ಅರ್ವಾಚೀನ ಕನ್ನಡ ಕಾದಂಬರಿಕಾರರು ಯಾರೂ ವರ್ಗವಾದ, ಬಂಡವಾಳವಾದ, ಜಾತಿವಾದಗಳನ್ನು ಅಂಗೀಕರಿಸುವುದಿಲ್ಲವೆಂಬುದು ಹೆಮ್ಮೆಯ ಮಾತು.

೪) ನಿರ್ಭಯತೆ : ಭಯವೇ ಸರ್ವ ಅನರ್ಥಕ್ಕೂ ಕಾರಣವೆಂದು ಉಪನಿಷತ್ತು ಸಾರಿ ಹೇಳಿ 'ಅಭೀಃ'ಮಂತ್ರವನ್ನು ಉಪದೇಶಿಸಿತು. ನಾವು ಸ್ವಲ್ಪ ವಿಚಾರಮಾಡಿದರೆ ತಿಳಿಯುತ್ತದೆ – ಇಂದು ನಮ್ಮನ್ನು ಆಳುತ್ತಿರುವುದು ಸತ್ಯವಲ್ಲ, ಪ್ರೇಮವಲ್ಲ – ಭಯ. ಭಯಗ್ರಸ್ತನಾದ ವ್ಯಕ್ತಿ ಸತ್ಯಸಾಧಕನಾಗಲಾರ. ಮನಸ್ಸು ಹೇಳುವುದನ್ನು ಮರೆಮಾಜಿ ಲೋಕಾಚಾರಕ್ಕೆ ಸತ್ಯಕ್ಕೆ ವಿರೋಧವಾದ ಬಾಳ್ವೆ ನಡೆಸುವ ವ್ಯಕ್ತಿ ಮಾನವವರ್ಗಕ್ಕೆ ಸೇರಲರ್ಹನಲ್ಲ. ವಾಸ್ತವಸಾಹಿತ್ಯ ಉಪನಿಷದ್ವಾಣಿಯನ್ನು ಆಚರಣೆಗೆ ತರಲೆತ್ನಿಸುತ್ತಿದೆ. 'ಮಾನವರ ಮನನೊಂದೀತೆಂದು ಸತ್ಯಕ್ಕೆ ಅಪಚಾರ ಮಾಡುವುದು ಬೇಡ'—

ಅಧರಕ್ಕೆ ಕಹಿಯಾಗಿ ಕಂಡುಬರುವ ಸತ್ಯ ಉದರಕ್ಕೆ ಸಿಹಿಯಾಗುತ್ತದೆ ಎಂದು ಅವನು ದೃಢವಾಗಿ ನಂಬಿದ್ದಾನೆ.

೫) ಜನಪದ ದೃಷ್ಟಿ : ಸಾಮ್ಯವಾದವೇ ಇಂದಿನ ವಾಸ್ತವ ಸಾಹಿತಿಯ ಧರ್ಮವಾಗಿದೆಯೆಂದು ಈ ಮೊದಲೇ ಸೂಚಿಸಿದ್ದೇನೆ. ಸಾಮ್ಯವಾದ ನಿರೂಪಣೆಗೆ ಅವನು ಅನುಸರಿಸುವ ಮಾರ್ಗ, ಅವಲಂಬಿಸುವ ಶೈಲಿಕೂಡ ಜನಪದದಿಂದಲೇ ಸ್ಫೂರ್ತಿಗೊಂಡುದಾಗಿದೆ. ವಿಚಾರ ಗಹನವಾಗಿರಬಹುದು. ಆದರೆ ನಿರೂಪಣೆ ಸರಳವೂ ಸಹಜವೂ ಆಗಿರಬೇಕು. ಅಭಿಪ್ರಾಯ ಪ್ರಖರವಾಗಿರಬಹುದು – ಆದರೆ ಅದನ್ನು ಹೇಳುವ ರೀತಿ ನಿಖರವಾಗಿರಬೇಕು. ದೊಡ್ಡ ತತ್ತ್ವ – ವಿಚಾರಗಳನ್ನು ಸಾಮಾನ್ಯನಿಗೂ ಅರ್ಥವಾಗುವಂತೆ ಹೇಳುವುದು ಅತ್ಯವಶ್ಯಕ.

ಕನ್ನಡದ ವಾಸ್ತವ ಕಾದಂಬರಿ ಇನ್ನೂ ಶೈಶವಾವಸ್ಥೆಯಲ್ಲಿದೆ. ಆದರೆ ಈ ಮಗು ಸುಪುಷ್ಟವಾಗಿ ಬೆಳೆಯುತ್ತಿರುವುದು ನಾಡಿನ ಭಾಗ್ಯ. ಈ ಮಗುವನ್ನು ಅಂತು ಬೆಳಸುತ್ತಿರುವ ಕನ್ನಡ ರಸಿಕರು ಧನ್ಯರು.

---

# ೮. ವಿಮರ್ಶಕನ ಹಾದಿ

ಪ್ರಾಚೀನ ಕನ್ನಡ ಸಾಹಿತ್ಯದ ದಿಗ್ದರ್ಶನ ಮಾಡುವಾಗ ನಮ್ಮ ಚಿತ್ತಫಲಕದ ಮೇಲೆ ಮೂಡುವ ವಿಷಯ – ಅದರ ವಿಮರ್ಶನ ವಿಭಾಗದ ದಾರಿದ್ರ್ಯ. ಪರಂಪರಾಗತವಾಗಿ ಮಹಾಕವಿಗಳು ಬಂದಾಗ, ಅವರ ಜತೆಯಲ್ಲಿ ವಿಮರ್ಶಕರು ಬರಲಿಲ್ಲವೇ? ಹಾಗಾದರೆ ಕ್ರಿಯಾತ್ಮಕ ಸಾಹಿತ್ಯ ದೊಂದಿಗೆ ವಿಮರ್ಶಾತ್ಮಕ ಸಾಹಿತ್ಯವೇಕೆ ಬೆಳೆಯಲಿಲ್ಲ?

ಕನ್ನಡ ಸಾಹಿತ್ಯ ಅರಮನೆಗಳತ್ತ ಮುಖಮಾಡಿದುದೇ ಕಾರಣವಾಗಿರ ಬಹುದು. ಅರಸರಿಗೆ ಬೇಕಾದ ಸಾಹಿತ್ಯವನ್ನು ಅರಸರಿಗೊಪ್ಪುವಂತೆ ಬರೆಯುವ ಕವಿ ತನ್ನ ಕೃತಿಯನ್ನು ವಿಮರ್ಶೆಯ ನಿಕಷಕ್ಕೆ ಒಪ್ಪಿಸುವ ಅಗತ್ಯ ವಿರಲಿಲ್ಲ. ತರುವಾಯದ ವಚನಕಾರರು, ದಾಸಪಂಥದವರು ಜನಪದಕ್ಕೆ ಸಾಹಿತ್ಯವನ್ನು ಅರ್ಪಿಸಿದಾಗ ಪಂಡಿತವರ್ಗ ಅವರ ಕೃತಿಯನ್ನು ಮಹಾಕಾವ್ಯ ಪರಂಪರೆ, ಹಾಗೂ ಸ್ಥಾನಕ್ಕೆ ಏರಿಸಲು ಒಪ್ಪಲಿಲ್ಲ. ಇಂದು ಯಾವ ವಚನ ಸಾಹಿತ್ಯವನ್ನು, ದಾಸಸಾಹಿತ್ಯವನ್ನು ನಾವು ಉನ್ನತ ಸ್ಥಾನದಲ್ಲಿ ನಿಲ್ಲಿಸಿ ದ್ದೇವೋ ಆ ಸಾಹಿತ್ಯಕ್ಕೆ ಒಂದು ಕಾಲದಲ್ಲಿ ನಮ್ಮ ಸಂಸ್ಕೃತಿ ಸಂವರ್ಧಕರಲ್ಲಿ ಕವಡೆಯಷ್ಟೂ ಬೆಲೆಯಿರಲಿಲ್ಲ.

ಆದರೆ ಕನ್ನಡಿಗರು ವಿಮರ್ಶೆಯನ್ನು ತೀರ ಅಲ್ಲಗಳೆದರೆಂದು ಭಾವಿಸು ವುದೂ ತಪ್ಪಾದೀತು. ಪಾಪ ಪುಣ್ಯ, ಹಿತ ಅಹಿತಗಳ ತಕ್ಕಡಿಯೊಂದಿತ್ತು. ಸರಸ್ವತಿಯನ್ ಅಬಲೆಯನ್ ಗೋಣ್ಮುರಿಗೊಂಡು ಅರ್ಥಕ್ಕೆ ಕುದಿಕುದಿದು ಸರಸ್ವತೀ ದ್ರೋಹಮಾಡುವುದು ಕಾವ್ಯವಲ್ಲ, ಕಾವ್ಯ ಸಹಜವಾಗಿ ಕೋಮಲ ವಾಗಿ ಇರಬೇಕು ಎಂಬ ಲಕ್ಷ್ಯವೂ ಇತ್ತು. ಕಾವ್ಯಕ್ಕೆ ರಸವೇ ಆತ್ಮ, ಭಾವ ದೇಹ, ಅರ್ಥ ಅವಯವ, ಅಲಂಕಾರ ಉಡಿಗೆತೊಡಿಗೆ ಎಂಬ ಪ್ರಸ್ಥಾನವೂ ಏರ್ಪಟ್ಟಿತು. ತಮ್ಮ ಕಾವ್ಯಪ್ರತಿಭೆಯನ್ನು ಸಾರಿಕೊಳ್ಳುವ ಅವಸರದಲ್ಲಿ ಕವಿಗಳು ಕಾವ್ಯಲಕ್ಷಣವನ್ನು ಆನುಷಂಗಿಕವಾಗಿ ಪ್ರಸ್ತಾಪಿ

ಸಿದ್ಧಾರೆ. ಈ ಮಾತುಗಳನ್ನು 'ವಿಮರ್ಶಾಶಾಸ್ತ್ರ'ವೆಂದು ಪರಿಗಣಿಸುವುದು ಇಂದಿನ ವಿಚಾರ ಯುಗಕ್ಕೆ ಸಲ್ಲದ ಮಾತು.

ವಿಮರ್ಶೆ ಒಂದು ಶಾಸ್ತ್ರವಾಗಿ, ಒಂದು ಕಲೆಯಾಗಿ ನಮ್ಮಲ್ಲಿ ಬೆಳೆಯು ಲಿಲ್ಲವೆಂಬುದು ಸ್ವತಃಸಿದ್ಧ. ಆದರೆ ಇವರಿಂದ ಆದ ನಷ್ಟವೇನು ? ಸಹೃದಯು ನಾದ ರಸಿಕಓದುಗ ನೇರವಾಗಿ ಕಾವ್ಯಾನಂದವನ್ನು ಅನುಭವಿಸಲು ಸಮರ್ಥ ನಾಗಿರುವಾಗ ಅವನಿಗೇಕೆ ವಿಮರ್ಶಕನ ಹಿಡಿಭಿಕ್ಷ-ನೆರವು. ಈ ವಾದ ಮಾಡುವಾಗ ನಾವು ಮೂಲಪ್ರಶ್ನೆಯೊಂದನ್ನು ಕೆಣಕುತ್ತಿದ್ದೇವೆ. ಸಾಹಿತ್ಯಕ್ಕೆ ವಿಮರ್ಶಕ ಬೇಕೆ ? ವಿಮರ್ಶಕನ ಹಂಗಿಲ್ಲದೆ ಸಾಹಿತ್ಯ ಬೆಳೆಯಲಾರದೇ ?

ವಿಮರ್ಶಕನ ಸ್ಥಾನಮಾನವನ್ನು ನಿರ್ಧರಿಸುವ ಮುನ್ನ, ನಾವು ಸಾಹಿತ್ಯದ ಬಗ್ಗೆ ನಮ್ಮ ಅಭಿಪ್ರಾಯವನ್ನು ಖಚಿತಗೊಳಿಸಿಕೊಳ್ಳಬೇಕು. ಧರ್ಮ, ಜೀವನ, ಸೌಂದರ್ಯದ ಮೇಲಣ ಅವಕುಂಠನವನ್ನು ಹರಿದೊಗೆ ಯುವುದೇ ಸಾಹಿತ್ಯದ ಉದ್ದೇಶವೆಂಬ ವ್ಯಾಖ್ಯೆಯನ್ನು ನಾವು ಒಪ್ಪಿಕೊಂಡರೆ ಆ ಕೆಲಸ ಕವಿಯೊಬ್ಬನಿಂದಲೇ ಆಗತಕ್ಕದ್ದಲ್ಲ. ಅವನಷ್ಟೇ ಶ್ರವಣ, ಮನನ, ನಿಧಿ, ಧ್ಯಾಸ ಮಾಡಿದ ಯಾವನಿಂದ ಬೇಕಾದರೂ ಆಗಬಹುದಾಗಿದೆ. ಸ್ಫೂರ್ತಿಯ ಆವೇಗದಲ್ಲಿ ಕವಿ ಯಾವ ಶಿಖರ ಮುಟ್ಟಿರುತ್ತಾನೆಯೋ ಆ ಶಿಖರದ ಬಳಿಗೆ ಓದುಗನನ್ನು ಒಯ್ಯಲು ಸಹೃದಯನ ನೆರವು ಬೇಕು. ಮಹಾಕವಿಯ ಭಾಷೆ, ರಚನೆ, ಶಯ್ಯೆ ಲಲಿತವಾಗಿರಬಹುದು, ಹೃದಯಂಗಮ ವಾಗಿರಬಹುದು. ಆದರೆ ಓದುಗ ಕ್ರಿಯಾತ್ಮಕವಾಗಿ ಅಲ್ಲದೆ ಇದ್ದರೂ ಮಾನಸಿಕವಾಗಿ ಮಹಾಕವಿಯಾಗಿರದಿದ್ದರೆ ಕವಿಯ ಭಾವನಾ ವಿಲಾಸವನ್ನು ಅನುಭವಿಸಲಾರ. ಕವಿ, ವಿಮರ್ಶಕ ಒಂದೇ ಹಾದಿಯಲ್ಲಿ ನಡೆದು ಹೋಗು ತ್ತಾರೆ. ಕವಿ ಒಂದು ಘಟ್ಟ ಮುಟ್ಟಿದ ಕೂಡಲೆ ಅಲ್ಲಿ ನಿಲ್ಲದೆ ಮುಂದೆ, ಮುಂದಕ್ಕೆ ಹೋಗುತ್ತಾನೆ. ವಿಮರ್ಶಕ ಅಲ್ಲಿ ನಿಲ್ಲುತ್ತಾನೆ. ಅದರ ಸುಪ್ತ ಸೌಂದರ್ಯವನ್ನು, ಮತ್ತವಿಲಾಸವನ್ನು, ತಾನು ಅವುಗಳನ್ನು ಕಂಡುಂಡ ಪರಿಯನ್ನು ಬಿಚ್ಚಿ ಹೇಳುತ್ತಾನೆ. ಕವಿ ಇಡಿಯಾಗಿ ಹೇಳಿದುದನ್ನು ವಿಮರ್ಶಕ ಬಿಡಿಬಿಡಿಯಾಗಿ ತೋರುತ್ತಾನೆ. ಕವಿ ಮುಚ್ಚಿ ಹೇಳಿದುದನ್ನು ವಿಮರ್ಶಕ ಬಿಚ್ಚಿ ಹೇಳುತ್ತಾನೆ.

ಕವಿ, ವಿಮರ್ಶಕ, ಓದುಗ ಇವರ ಪರಸ್ಪರ ಸಂಬಂಧವನ್ನು ನೋಡುವಾಗ ಕವಿಗಿಂತಲೂ ಓದುಗನಿಗೆ ವಿಮರ್ಶಕನ ನೆರವು ಬೇಕು. ವಿಮರ್ಶಕನ ನೆರವು, ಪ್ರೋತ್ಸಾಹ, ಹರಕೆ ಇಲ್ಲದಿದ್ದರೂ ಕವಿ ಬಾಳಬಲ್ಲ; ಆದರೆ ಓದುಗ ಬಾಳಲಾರ. ಕವಿಯ ಕ್ರಿಯಾಶಕ್ತಿಗೆ ಪ್ರಚೋದಕವಾಗುವದು ಅವನ ಪ್ರತಿಭೆಯೇ ವಿನಾ ವಿಮರ್ಶಕನ ಅಭಿಪ್ರಾಯವಲ್ಲ.

ಅರಿಸ್ಟಾಟಲ್, ಲೆಸ್ಸಿಂಗ್, ಡ್ರೈಡನ್ ವಿಮರ್ಶಕನ ಹಾದಿಯನ್ನು ನಿರ್ದೇಶಿಸಿದರು. ಕಲೆ ಜೀವನದ ವ್ಯಾಖ್ಯೆ ಎಂದು ಷೇಕ್ಸಪಿಯರ್ ಸೂಚಿಸಿದುದನ್ನೇ ತರುವಾಯದ ವಿಮರ್ಶಕರೂ ಒಪ್ಪಿಕೊಂಡರು. ಕಳೆದ ಶತಮಾನದಂತ್ಯಕ್ಕೆ ವಿಮರ್ಶಕ ಕೇವಲ ಕವಿಯ ಛಾಯಾನುವರ್ತಿ ಎಂಬ ಅಭಿಪ್ರಾಯ ಬಿದ್ದುಹೋಯಿತು. ಫ್ರೆಡಿರಿಕ್ ಹ್ಯಾರಿಸನ್, ಮ್ಯಾಥ್ಯೂ ಆರ್ನಾಲ್ಡ್, ವಾಲ್ಟರ್ ಪೇಟರ್, ಸ್ಪ್ರಿಗಾರ್ನ್, ಲಡ್ವಿಗ್ ಲೂಯಿಸ್ಹಾನ್ ಮೊದಲಾದ ವಿಮರ್ಶಕರು ಕಾವ್ಯವಿಮರ್ಶೆಗೆ ಸ್ವತಂತ್ರ ಕೃತಿಯ ಸ್ಥಾನ ತಂದುಕೊಟ್ಟು ವಿಮರ್ಶಕನನ್ನೂ ಕವಿಯನ್ನೂ ಸಮಾನಸ್ಥಾನದಲ್ಲಿ ಕೂಡಿಸಿದರು. ಕವಿ, ಜೀವನವನ್ನು ತನ್ನ ಕ್ರಿಯಾವಿಲಾಸಕ್ಕೆ ಬಳಸಿಕೊಳ್ಳುವಂತೆ ವಿಮರ್ಶಕ ಕವಿಕೃತಿಗಳನ್ನು ಬಳಸಿಕೊಳ್ಳುತ್ತಾನೆಂಬ ಸಿದ್ಧಾಂತಕ್ಕೆ ಬಂದರು.

ಇಂದು ಹೊಸ ಮಾನದಂಡವೇರ್ಪಡುತ್ತಿದೆ. ಕವಿ ಎಲ್ಲ ವಿಷಯಗಳನ್ನೂ ವೈಯಕ್ತಿಕವಾಗಿ ನೋಡುವ ಚಟ ಬಿಟ್ಟು ಸಾಮೂಹಿಕವಾಗಿ ನೋಡಬೇಕು. ಅವನು ಒಂದು ಮಹಾಸಂಸಾರಚಕ್ರದ ಕೀಲು. ಹಾಗೆಯೇ ವಿಮರ್ಶಕ ಎಂಬ ಅಭಿಪ್ರಾಯ ರೂಪುಗೊಳ್ಳುತ್ತಿದೆ.

ಕನ್ನಡದ ನವೋದಯ ಕಾಲಕ್ಕೆ ಅಂದರೆ ಸುಮಾರು ಐವತ್ತು ವರ್ಷಗಳ ಹಿಂದೆ ವಿಮರ್ಶನ ಶಾಸ್ತ್ರ ಹಾಗೂ ಕಲೆ ಆರಂಭವಾಯಿತು. ಆ ಕಾಲಕ್ಕೆ ಬಂದ ವಿಮರ್ಶಕರು ಪ್ರತಿಯೊಂದು ಕೃತಿಯನ್ನೂ ವ್ಯಾಕರಣ, ಛಂದಸ್ಸುಗಳ ಮಾನದಂಡದಿಂದ ಅಳೆಯುತ್ತಿದ್ದರು. ಕವಿಕೃತಿಯಿಂದ ಯಾವ ರಸ ಚಿಮ್ಮುತ್ತಿದೆ, ಯಾವ ಭಾವ ಬೆಳಗುತ್ತಿದೆ ಎಂಬ ವಿಷಯ ಅವರಿಗೆ ಪ್ರಧಾನವಾಗಿರಲಿಲ್ಲ. ಕವಿ ಶಬ್ದಮಣಿದರ್ಪಣ, ಕಾವ್ಯಾವಲೋಕನಗಳನ್ನು ಜೀರ್ಣಿಸಿಕೊಂಡಿದ್ದಾನೆಯೇ ಎಂಬುದೇ ಮುಖ್ಯ ವಿಷಯವಾಗಿತ್ತು.

ವ್ಯಾಕರಣ ಮಾನದಂಡದಿಂದ ನಾವಿಟ್ಟ ಮುಂದಿನ ಹೆಜ್ಜೆ ರಸವಿಮರ್ಶೆ. ಕಳೆದ ಎರಡು ದಶಕಗಳಲ್ಲಿ ಇದು ಬೆಳೆದುದನ್ನು ನಾವು ನೋಡಬಹುದು. ಈ ಕಾಲದ ವಿಮರ್ಶಕ ಪ್ರಾಚೀನ, ಅರ್ವಾಚೀನ ಸಾಹಿತ್ಯಕ್ಕೆ ಹಿಮಾಲಯದಷ್ಟು ಅಂತರ ಕಾಣುತ್ತಾನೆ. ಹಳೆಯದಾದುದು ಶ್ರೇಷ್ಠ, ಹೊಸದು ನಿಕೃಷ್ಟ ಎಂಬ ಭಾವನೆ ಅವನ ವಿಮರ್ಶೆಯಲ್ಲಿ ಒಡೆದು ಕಾಣುತ್ತದೆ.

ನವೋದಯದ ಕಾಲದ ಸಾಹಿತ್ಯ ಕನ್ನಡಕ್ಕೆ ಹೊಸ ನೀರನ್ನು ತಂದಂತೆ, ಹಳೆಯ ಸ್ವಾರ್ಥ, ಸಂಕುಚಿತ ಭಾವನೆಗೂ ಪುಟಗೊಟ್ಟಿತು. ನವೋದಯ ಕಾಲದ ಆಚಾರ್ಯರ ಮಠಕ್ಕೆ ಸೇರದ ಕವಿಗಳ ಕೃತಿಗಳನ್ನು ತೀರ ಕನಿಷ್ಠವೆಂದು ಕಾಣುವುದು ಆ ಕಾಲದ ವಿಮರ್ಶಕರ ಚಾಳಿಯಾಯಿತು. 'ಶ್ರೀ.... ಇಂಥವರು ............ ಇಂಥ ಗ್ರಂಥ ಬರೆದಿರುವುದರಿಂದ ಅದು ಚೆನ್ನಾಗಿರಲೇ ಬೇಕು' ಎಂಬ ಮಾತು ಅವರ ನಾಂದಿಯಾಯಿತು. ವಿಮರ್ಶಕರ ಪಕ್ಷ ಮನೋಭಾವ ಪ್ರತಿಪಕ್ಷಗಳ ಹುಟ್ಟಿಗೆ ಕಾರಣವಾಗಿ ಘರ್ಷಣೆಯೊದಗಿತು. ಸಾಹಿತ್ಯಸಾಗರದ ಮಂಥನದಿಂದ ಅಮೃತದ ಬದಲು ವಿಷಹುಟ್ಟಿತು.

ಈ ದಶಕದಲ್ಲಿ ಕನ್ನಡವಿಮರ್ಶೆಯ ಹೊಸ ಅವತಾರವನ್ನು ನಾವು ಕಾಣಬಹುದು. ವಿಮರ್ಶೆಗೆ ಜಾನಪದ ಸ್ವರೂಪ ಬರುವ ಶುಭಚಿಹ್ನ ಕಂಡು ಬಂದಿತು. ವೃತ್ತಪತ್ರಿಕೆಗಳ ಬೆಳವಣಿಗೆಯಿಂದ ವಿಮರ್ಶೆ ಪಂಡಿತವರ್ಗದಿಂದ ಪತ್ರಿಕೆಗಳಿಗೆ ಬರೆಯುವವರ ಕೈಗೆ ಬಂದಿತು. ಜನತೆಗೂ ಕವಿಗೂ ವಿಮರ್ಶಕ ಒಂದು ಬಗೆಯಲ್ಲಿ ಸೇತುವೆಯಾಗಿರುವುದರಿಂದ ವಿಮರ್ಶೆ ಒಂದು ಹೊಸ ಚೇತನ ಪಡೆಯುವುದು ಆವಶ್ಯಕವಾಗಿತ್ತು. ಆದರೆ ಪರಿಸ್ಥಿತಿ ಮತ್ತಷ್ಟು ವಿಕೋಪಕ್ಕೆ ಹೋಯಿತು. ಸಾಕಷ್ಟು ಪಾಂಡಿತ್ಯ, ಅನುಭವ ದೊರಕಿಸಿ ಕೊಳ್ಳದ ಜನರ ಕೈಗೆ ಕವಿಯ ಕೃತಿಗಳು ಸಿಕ್ಕಿದವು. ಕ್ರಿಯಾರಂಗದಲ್ಲಿ ತನ್ನ ಪ್ರಭೆಯನ್ನು ಪಸರಿಸಲಾಗದ ಪತ್ರಿಕಾಕರ್ತ ವಿಮರ್ಶನರಂಗದಲ್ಲಿ ತನ್ನ ಮುದ್ರೆಯನ್ನೊತ್ತಲೆತ್ನಿಸಿದ. ಕವಿ ಅನೇಕ ವರ್ಷಗಳ ಸಾಧನದಿಂದ, ಪ್ರಯತ್ನದಿಂದ, ಅಭ್ಯಾಸದಿಂದ ಅಳವಡಿಸಿದ ಕೃತಿಯನ್ನು ವಿಮರ್ಶಕ ಒಂದೇ ಪೆಟ್ಟಿನಿಂದ ಹೊಡೆಯಲೆತ್ನಿಸಿದ. ಕವಿ ಪ್ರತಿಭೆಯಿಂದ ತನ್ನ ಪ್ರಭಾವ ಬೆಳಸಿದರೆ ವಿಮರ್ಶಕ ತನ್ನ ಕಟುಲೇಖನಿಯಿಂದ ಪ್ರಭಾವ ಬೆಳಸತೊಡಗಿದ.

ನವೋದಯ ಆರಂಭವಾಗಿ ಅರ್ಧ ಶತಮಾನಕ್ಕೆ ಬಂದರೂ ನಮ್ಮಲ್ಲಿನ್ನೂ ವಿಮರ್ಶನಕಲೆ ಒಂದು ಸ್ವರೂಪ ಪಡೆಯದಿರುವುದು ನಮ್ಮ ದೌರ್ಭಾಗ್ಯ. ಕಟುವಾಗಿ ಬರೆದು, ಕವಿಯ ಮನಸ್ಸಿಗೆ ಕಿರುಕುಳಕೊಟ್ಟೆನೆಂದು ತೃಪ್ತಿಪಟ್ಟು ಕೊಳ್ಳುವ ವಿಮರ್ಶಕ ಸರಸ್ವತಿದ್ರೋಹವನ್ನೂ ಮಾಡುತ್ತಿದ್ದಾನೆಂಬುದನ್ನು ಮರೆಯಬಾರದು. ಕಾವ್ಯಪ್ರಪಂಚದಲ್ಲಿ ಕಟು ವಿಮರ್ಶೆಯನ್ನು ಜೀರ್ಣಿಸಿ ಕೊಳ್ಳಬಲ್ಲ ವಾಲ್ಟ್ ವ್ಹಿಟಮನ್‌ಗಳಿಗಿಂತ ಷೆಲ್ಲಿಗಳು ಅಧಿಕರಾಗಿದ್ದಾರೆ. ವಿನಾಕಾರಣ ಕವಿಯ ಕ್ರಿಯಾಶಕ್ತಿಯ ಮೇಲೆ ಆಘಾತಮಾಡುವ ವೃತ್ತಿ ಪಶುವೃತ್ತಿ.

ಕಟು ವಿಮರ್ಶೆಗೆ, ಕಾವ್ಯಾಭಾಸಕ್ಕೆ ಹೊರಡುವ ವಿಮರ್ಶಕ ತನ್ನ ಅಧಿಕಾರವೇನೆಂಬುದನ್ನು ತಾನೇ ಕೇಳಿಕೊಳ್ಳಬೇಕು. ಕೈಗೆ ಸಿಕ್ಕಿದ ಗಡಿಯಾರವನ್ನು ಅಂಬೆಗಾಲಿಕ್ಕುವ ಮಗು ಕೂಡ ಬಿಚ್ಚಿ, ಹರಿದು, ಚೂರು ಚೂರು ಮಾಡಿಬಿಡಬಹುದು. ಆದರೆ ಅದನ್ನು ಮತ್ತೆ ಕೂಡಿಸುವದಕ್ಕೆ ಪ್ರತಿಭೆಬೇಕು.

ವಿಮರ್ಶಕ ಕವಿಮಿತ್ರನೇ ವಿನಾ, ಕವಿ ಶತ್ರುವಲ್ಲ. ದೋಷವನ್ನೆತ್ತಿ ಹೇಳುವುದು ಸುಲಭ. ಗುಣಗ್ರಹಿಸುವುದು ಕಷ್ಟಸಾಧ್ಯ. ಗ್ರಹಿಸಿದ ಗುಣವನ್ನು ಹಲವರ ಮನಸ್ಸುಮುಟ್ಟುವಂತೆ ಬಿಚ್ಚಿ ಹೇಳಬಲ್ಲ ಶಕ್ತಿ ಅಧಿಕಶಕ್ತಿ. ಆ ಮಹಾಶಕ್ತಿಯನ್ನು ಹೇಗೆ ಸಾಧಿಸಬಹುದೆಂಬುದರ ಕಡೆಗೆ ವಿಮರ್ಶಕನ ಲಕ್ಷ್ಯ ಹೊರಳಬೇಕು.

ನಮಗಿಂದು ಕ್ರಿಯಾತ್ಮಕವಾದ ಸಾಹಿತ್ಯವೆಷ್ಟು ಆವಶ್ಯಕವಾಗಿದೆಯೋ ಅಷ್ಟೇ ಕ್ರಿಯಾತ್ಮಕವಾದ ವಿಮರ್ಶೆಯೂ ಅಗತ್ಯವಾಗಿದೆ. ವಿಮರ್ಶಕ ತಾನೂ ಸಹೃದಯ ಜೀವಿ ಎಂಬದುದನ್ನು ಅರಿತರೇ ಕ್ರಿಯಾತ್ಮಕ ವಿಮರ್ಶೆಯ ಸೃಷ್ಟಿ ಸಾಧ್ಯ.

---

# ೯. ವೀರಶೈವ ಸಾಹಿತ್ಯದ ನಿಜಸ್ವರೂಪ

ಸಾಹಿತ್ಯವನ್ನು ಜಾತಿಯ ಕಟ್ಟಿಗೆ ಸಿಕ್ಕಿಸಿ ಅದರ ಯೋಗ್ಯತೆಯನ್ನು ಅಳೆಯುವುದು ಸಾಹಿತ್ಯಪ್ರಗತಿ ದೃಷ್ಟಿಯಿಂದಾಗಲಿ ದೇಶಾಭ್ಯುದಯದ ದೃಷ್ಟಿಯಿಂದಾಗಲಿ ಶ್ರೇಯಸ್ಕರವಲ್ಲ. ದೇಶ, ಕಾಲ, ಜಾತಿ, ಮತ, ಪಂಥಗಳ ಕೃತಕ ಮಾನದಂಡವನ್ನು ಕಡೆಗಾಣಿಸಿ ಚಿರಸ್ಥಾಯಿಯೂ ಚಿರವಿನೂತನವೂ ಆದ ಜೀವನದ ಸತ್ಯ ಸೌಂದರ್ಯದಕಡೆಗೆ ಜಗತ್ತಿನಲ್ಲಿ ಯಾವುದಾದರೂ ಲಕ್ಷ್ಯವಿಟ್ಟಿದ್ದರೆ ಅದು – ಸಾಹಿತ್ಯ. ಮತ, ಅರ್ಥ, ಕಾಮ ಇಟ್ಟ ತಪ್ಪು ಹೆಜ್ಜೆಯನ್ನೇ ಸಾಹಿತ್ಯವೂ ಇಟ್ಟಿದ್ದ ಪಕ್ಷಕ್ಕೆ ಅದಕ್ಕೆ ನಾವು ಇಂದು ಕೊಡುತ್ತಿರುವ ಗೌರವ ಸಲ್ಲಿಸಬೇಕಾದ ಕಾರಣವಿರುತ್ತಿರಲಿಲ್ಲ,

ಆದರೆ ನಮ್ಮ ದೇಶದಲ್ಲಿ ಸಾಹಿತ್ಯ, ಧರ್ಮ ಹಾಸುಹೊಕ್ಕಾಗಿ ಹೆಣೆದು ಕೊಂಡಿವೆ. ಪರವಸ್ತುವಿನ ಅನಂತ ವೈಭವ, ವೈಖರಿಗಳನ್ನು ಬಣ್ಣಿಸಲು ಹೊರಟ ಉಪನಿಷತ್ತುಗಳು ಸಾಹಿತ್ಯದ ಮರೆಹೊಗಬೇಕಾಯಿತು. ಹಾಗೆಯೇ ಸಾಹಿತ್ಯದ ಅವಿನಾಶಿಯಾದ ತತ್ವಗಳನ್ನು ಪ್ರತಿಪಾದಿಸಲು ಹೊರಟ ಪ್ರಕಾರವೂ ಧರ್ಮದ ಮರೆಹೊಗಬೇಕಾಯಿತು.

ಇಂಥ ಸಂಯೋಗ ಕೆಲವು ಸಲ ಮಧುರವಾಗುವುದೂ ಉಂಟು ; ಕೆಲವು ಸಲ ವಿಷಮವಾಗುವುದೂ ಉಂಟು. ಧರ್ಮದ ಅನಂತತತ್ವಗಳನ್ನು ಸಾಹಿತ್ಯ ಒಪ್ಪಿಕೊಂಡು ತನ್ನ ವಿಶಿಷ್ಟ ರೀತಿಯಲ್ಲಿ ಪ್ರತಿಪಾದಿಸುತ್ತಿದೆಯಾದರೂ ಅದರ ಭಿನ್ನ ಭಿನ್ನ ಸ್ವರೂಪವಾದ ಮತಗಳ ಬಲವದ್ಬಂಧಕ್ಕೆ ಸಿಕ್ಕಿ ತೊಳಲಾಡುವುದಿಲ್ಲ. ಮತಪ್ರಕ್ರಿಯೆಗಳನ್ನು ಒಪ್ಪಿಕೊಂಡರೂ ಯಾವ ಸಾಹಿತ್ಯ ತನ್ನ ಸ್ವಭಾವ ಗುಣವನ್ನು ಕಳೆದುಕೊಳ್ಳುವುದಿಲ್ಲವೋ ಅದನ್ನು ನಾವು ಶ್ರೇಷ್ಠ ಸಾಹಿತ್ಯವೆಂದು ಪರಿಗಣಿಸುತ್ತೇವೆ.

ಕನ್ನಡ ಸಾಹಿತ್ಯವನ್ನು ಜೈನ – ವೀರಶೈವ – ಬ್ರಾಹ್ಮಣ ಸಾಹಿತ್ಯವೆಂದು ವಿಭಾಗಿಸುವ ಪರಿಪಾಠ ಬಂದಿದೆ. ಜೈನ, ವೀರಶೈವ, ಬ್ರಾಹ್ಮಣ ಕವಿಗಳು ಬರೆದರೆಂದು ಅವುಗಳಿಗೆ ಮತಸಂಬಂಧವಾದ ಹೆಸರು ಕೊಡಬೇಕೇ ? ಅಥವಾ

ಆ ಕವಿಗಳು ಕೇವಲ ತಮ್ಮ ಮತೀಯರನ್ನು ಕುರಿತು ಬರೆದರೆಂದು ಹಾಗೆ ಕರೆಯಬೇಕೇ ? ಪಂಪ, ರನ್ನ, ಜನ್ನ, ರತ್ನಾಕರ ಜೈನಮತೀಯರು. ತಮ್ಮ ಮತದಬಗ್ಗೆ ವಿಪುಲ ಶ್ರದ್ಧೆ, ಭಕ್ತಿ ತಾಳಿದ್ದವರು. ಆದರೆ ಅವರ ಸಾಹಿತ್ಯ ಕೇವಲ ಜೈನರಿಗಾಗಿ ನಿರ್ಮಿತವಾದುದಲ್ಲ. ಜೈನರಷ್ಟೇ ಜೈನೇತರರೂ ಅವುಗಳನ್ನು ಓದಿ ಸುಖಿಸಬಹುದು. ಹರಿಹರ, ರಾಘವಾಂಕ, ಸರ್ವಜ್ಞರ ಬಗ್ಗೆಯೂ, ಕುಮಾರವ್ಯಾಸ, ಲಕ್ಷ್ಮೀಶ, ರುದ್ರಭಟ್ಟ ಇವರ ಬಗ್ಗೆಯೂ ಇದೇ ಮಾತು ಅನ್ವಯಿಸುತ್ತದೆ.

ಮತಕ್ಕೆ ವಿಚಾರದ ಮುಖವೊಂದಿದೆ, ಆಚಾರದ ಮುಖವೊಂದಿದೆ. ಜೈನರ ಸಮ್ಯಕ್‌ಬೋಧ, ಸಮ್ಯಕ್‌ಜ್ಞಾನ, ಸಮ್ಯಕ್ ಚಾರಿತ್ರ್ಯಗಳೂ ; ವೀರಶೈವರ ಷಟ್‌ಸ್ಥಲ ಸಿದ್ಧಾಂತವೂ, ಬ್ರಾಹ್ಮಣರ ಚತುರ್ವಿಧ ಪುರುಷಾರ್ಥವೂ ವಿಶ್ವಮಾನ್ಯತೆಯನ್ನು ಪಡೆಯಲರ್ಹವಾಗಿವೆ. ಆದರೆ ಮತಸಂಬಂಧವಾದ ಆಚಾರಗಳನ್ನು ಎತ್ತಿ ಹಿಡಿದಾಗ ಪರಸ್ಪರ ಘರ್ಷಣೆ ಬರಲು ಅವಕಾಶ ವಾಗುತ್ತದೆ. ವೀರಶೈವನಲ್ಲದವನು ಷಟ್‌ಸ್ಥಲವನ್ನು ಒಪ್ಪುವಷ್ಟು ಸುಲಭವಾಗಿ ಪಂಚಾಚಾರ, ಅಷ್ಟಾವರಣಗಳನ್ನು ಒಪ್ಪಲಾರ.

ವೀರಶೈವ ಸಾಹಿತ್ಯದಲ್ಲಿ ನಾವು ಇಂದು ಗಮನಿಸುವುದು 'ಸಮಸ್ತ ಜನ ಬದುಕಲೆಂದು' ನಿರ್ಮಾಣವಾದ ಸಾಹಿತ್ಯಭಾಗ. ಎಲ್ಲ ಮತಗಳಿಗಿಂತ ವೀರಶೈವವೇ ಪರಮಶ್ರೇಷ್ಠವೆಂದೂ, ಶಿವನಂ, ತದೀಯ ಪ್ರಜಮುಂ ಮಾತ್ರ ಸ್ತುತಿಸಬೇಕೆಂದು ಹೇಳಿದ ಕಟುಮಾತುಗಳು ನಮಗೆ ಅಷ್ಟು ಅವಶ್ಯಕವಲ್ಲ. ಪ್ರತಿಯೊಂದು ಮತವೂ ಇಂಥ ಕಟುಮಾತುಗಳನ್ನು ಅಜ್ಞಾನಾವಸ್ಥೆಯಲ್ಲಿ ನುಡಿದಿದೆ. ನಾವು ಆರಸುವುದು ಆ ಮತಗಳ ಮಾಸದ ಸತ್ಯ-ಸೌಂದರ್ಯವನ್ನು. ಅದರ ಪ್ರಭಾವದಿಂದ ಆಯಾ ಮತಗಳ ಕಲ್ಯಾಣ ಮಾತ್ರವೇ ಅಲ್ಲ, ಇಡೀ ಜಗತ್ತಿನ ಕಲ್ಯಾಣವಾಗುವುದೆಂದು ನಮ್ಮ ನಂಬಿಕೆ.

ಬಸವಣ್ಣನಿಂದ ಸರ್ವಜ್ಞನವರೆಗೆ ಒಂದು ಮತದ ಜಾಡನ್ನು ಹಿಡಿದು ಬೆಳೆದ ಸಾಹಿತ್ಯವನ್ನು ರೂಢಿಯಲ್ಲಿ 'ವೀರಶೈವ ಸಾಹಿತ್ಯ' ಎಂದು ಕರೆಯುತ್ತೇವೆ. ಈ ಸಾಹಿತ್ಯ ಎರಡು ಕವಲಾಗಿ ಒಡೆದು, ಒಂದೊಂದು ಕವಲೂ ಒಂದೊಂದು ಕಲ್ಪವೃಕ್ಷವಾಗಿ ಬೆಳೆದುದು ಕಂಡುಬರುತ್ತದೆ. ಬಸವಾದಿ ಪ್ರಮಥರು 'ನುಡಿದರೆ ಮುತ್ತಿನ ಹಾರದಂತಿರಬೇಕು, ನುಡಿದರೆ ಲಿಂಗಮೆಚ್ಚಿ

ಅಹುದೆನ್ನಬೇಕು' ಎಂಬ ಪಂಥದವರು. ರಾಘವಾಂಕ, ಚಾಮರಸ, ವಿರೂಪಾಕ್ಷಪಂಡಿತ, ಮಲ್ಲಣಾರ್ಯ, ಷಡಕ್ಷರಿ, ಇವರು ಮಹಾಕಾವ್ಯ ಪರಂಪರೆಗೆ ಸೇರಿದವರು. ಹರಿಹರ ಮಾತ್ರ ಶರಣ ಸಾಹಿತ್ಯ ಮತ್ತು ಮಹಾ ಕಾವ್ಯ ಪರಂಪರೆಗಳೆರಡಕ್ಕೂ ಸೇತುವೆ ಕಟ್ಟಿಸಲೆತ್ನಿಸಿದ.

ವೀರಶೈವ ಕವಿಗಳ ಮಹಾಕಾವ್ಯ ಸಾಹಿತ್ಯ ಜೈನ ಕವಿಗಳ ಸರಿಜೋಡಿಯಾಗಿ ನಿಲ್ಲಬಲ್ಲದೆಂದು ಹೇಳಲು ಸಾಧ್ಯವಿಲ್ಲ. ಪಂಪನ ಪ್ರಾಗಲ್ಭ್ಯ, ರನ್ನನ ರುದ್ರರಮಣೀಯತೆ, ಜನ್ನನ ಹೃದಯಸ್ಪರ್ಶಿತ್ವ, ರತ್ನಾಕರನ ರಸವಿಲಾಸ ವೀರಶೈವ ಕವಿಗಳಲ್ಲಿ ಕಂಡು ಬರುವುದಿಲ್ಲ. ಆದರೆ ವೀರಶೈವರು ಶರಣ ಪಂಥದವರು. ಅವರು ಸೃಷ್ಟಿಸಿದ 'ವಚನ ಸಾಹಿತ್ಯ' ಜಗತ್ತಿನ ಅನುಭವ ಸಾಹಿತ್ಯದಲ್ಲಿ ಹಿರಿಯ ಸ್ಥಾನ ಪಡೆಯಲು ಅರ್ಹವಾಗಿದೆ.

ವೀರಶೈವ ವಚನಕಾರರು ಪರಮಾತ್ಮ, ಅವನ ಸೇವಕ ಗಣವನ್ನಲ್ಲದೆ ಅನ್ಯರನ್ನು ಸ್ತುತಿಸುವುದಿಲ್ಲ; ಪ್ರತಿಯೊಂದು ಅನುಭವವನ್ನೂ ಅನುಭಾವದ ಮೂಸೆಯಲ್ಲಿ ಪರೀಕ್ಷೆಮಾಡಿ ನೋಡಬೇಕು; ಹೇಳುವಮಾತು ತಿಳಿದ ಕೆಲವರಿಗೆ ಮಾತ್ರ ಮೀಸಲಾಗಿರಬಾರದು, ತಿಳಿಯದ ಹಲವರಿಗೆ ನೆರವಾಗಬೇಕು ಎಂಬ ತತ್ವಗಳನ್ನು ಬಹಳ ನಿಷ್ಠೆಯಿಂದ ಆಚರಣೆಗೆ ತಂದಿದ್ದಾರೆ. ಜೀವನದ ಸಾಮಾನ್ಯ ಅನುಭವವನ್ನು ಅನುಪಮವಾಗಿ ಬೆಳಸಿಕೊಂಡು ಸಾಹಿತ್ಯದ ಮಹಾಬೆಳಗನ್ನು ಮನೆಮನೆಗೆ ಕೊಂಡೊಯ್ದಿದ್ದಾರೆ. ವಿನಯದಾವಶ್ಯ ಕತೆಯನ್ನು ಕುರಿತು ಪ್ರಸ್ತಾಪಿಸುತ್ತ ಬಸವಣ್ಣನವರು.

"ಕಾಗೆ ವೃಷ್ಟಿಸುವ ಹೊನ್ನ ಕಳಶವಹುದರಿಂದ, ಒಡೆಯರು ಜೋಗೈಸುವ ಚಮ್ಮಾವುಗೆಯ ಮಾಡಯ್ಯ.

ಅಯ್ಯಾ ನಿಮ್ಮ ಶರಣರ ಪಾದಕ್ಕೆ ಚೆಮ್ಮಾವುಗೆಯ ಮಾಡಯ್ಯ"

ಎಂದು ನುಡಿದಿದ್ದಾರೆ. ತಲೆಯೆತ್ತಿ ನಿಂತು ಹಲವರ ಕೈಯಿಂದ ಮುಟುಕಿಸಿಕೊಳ್ಳುವುದಕ್ಕಿಂತ 'ಎನಗಿಂತ ಕಿರಿಯರಿಲ್ಲ' ಎಂದು ವಿನಯ ಶೀಲನಾಗಿ ಬಾಳುವುದು ಲೇಸು, ಎಂಬ ಸುಬೋಧಕ್ಕೆ ಬಸವಣ್ಣನವರು ಮಿಸುನಿಯ ಮೆರುಗುಕೊಟ್ಟಿದ್ದಾರೆ.

ಮಾಯೆಯ ಮೂಲವನ್ನು ಕೆದಕಿ 'ಹೊನ್ನು ಮಾಯೆ ಎಂಬರು, ಹೆಣ್ಣು ಮಾಯೆ ಎಂಬರು, ಮಣ್ಣುಮಾಯೆ ಎಂಬರು. ಹೊನ್ನು ಮಾಯೆ

ಯಲ್ಲ. ಹೆಣ್ಣು ಮಾಯೆಯಲ್ಲ, ಮಣ್ಣು ಮಾಯೆಯಲ್ಲ, ಮನದ ಮುಂದ ಣಾಸೆಯೆ ಮಾಯೆ ಕಾಣಾ ಗುಹೇಶ್ವರಾ.'

ಎಂದು ಹೇಳುವಾಗ 'ನಾನು ನನ್ನದು' ಎಂಬ ಭಾವನೆ ಎಲ್ಲ ಅನರ್ಥಕ್ಕೂ ಮೂಲವೆನ್ನುವುದನ್ನು ಪ್ರಭುದೇವರು ಅನ್ಯಾದೃಶವಾಗಿ ವರ್ಣಿಸಿದ್ದಾರೆ.

ಧರ್ಮದಂತೆ ಮಾನವಾವತಾರದ ಒಳಹೊರ ಮುಖಗಳ ನಿಜರೂಪ ವನ್ನೆತ್ತಿ ತೋರಿಸುವುದು ಸಾಹಿತ್ಯದ ಗುರಿ. ಧರ್ಮ ನಿಷ್ಠುರಸತ್ಯದ ಹಾದಿಯನ್ನು ಹಿಡಿಯುತ್ತದೆ; ಸಾಹಿತ್ಯ ಪ್ರಿಯವಾದ ಸೌಂದರ್ಯ ದಾರಿ ಯನ್ನನುಸರಿಸುತ್ತದೆ.

ಮಾನವ ಜೀವನದ ಗುರಿಯೇನು? ಎಂಬ ಪ್ರಶ್ನೆಯನ್ನು ಜಗತ್ತಿನ ಎಲ್ಲ ಅನುಭವಿಗಳೂ, ದಾರ್ಶನಿಕರೂ ಬಿಡಿಸಲೆತ್ನಿಸಿದ್ದಾರೆ. ಜೀವ, ಬ್ರಹ್ಮತ್ವ ವನ್ನೈದುವುದು ಹೇಗೆಂಬುದನ್ನು ಕಂಡುಹಿಡಿಯುವುದೇ ಮಾನವನ ಗುರಿ ಯೆಂದು ಉಪನಿಷತ್ತುಗಳು ಸಾರಿದುವು. ಈ ಧ್ವನಿಯನ್ನೇ ಪ್ರಭುದೇವರು ಎತ್ತಿಹಿಡಿದಿದ್ದಾರೆ.

"ಎತ್ತಣ ಮಾಮರ. ಎತ್ತಣ ಕೋಗಿಲೆ?
ಎತ್ತಣಿಂದೆತ್ತ ಸಂಬಂಧವಯ್ಯಾ?
ಬೆಟ್ಟದ ನೆಲ್ಲಿಕಾಯಿ, ಸಮುದ್ರದೊಳಗಣ ಉಪ್ಪು
ಎತ್ತಣಿಂದೆತ್ತ ಸಂಬಂಧವಯ್ಯಾ?
ಗುಹೇಶ್ವರ ಲಿಂಗಕ್ಕೆಯು ಎನಗೆಯು
ಎತ್ತಣಿಂದೆತ್ತ ಸಂಬಂಧವಯ್ಯಾ"

ಜೀವನ ಒಳಗು ಶುದ್ಧವಾಗಿ ಅದು ಬ್ರಹ್ಮಮಂದಿರವಾಗಬೇಕಾದರೆ– ಬ್ರಹ್ಮನೇ ಆಗಬೇಕಾದರೆ ಅವನ ಹೊರಗೂ ಶುದ್ಧವಾಗಬೇಕು. ಸದಾಚಾರ, ಸದ್ವಿನಯ, ಸತ್ಕ್ರಿಯೆಗಳಿಂದ ಅವನು ತನ್ನ ಮಾಯಾಮಲಗಳನ್ನು, ಉಪಾಧಿಗಳನ್ನು ನೀಗಿಕೊಳ್ಳಬೇಕು. 'ಅಯ್ಯಾ ಎಂದಡೆ ಸ್ವರ್ಗ – ಎಲವೋ ಎಂದಡೆ ನರಕ'–'ಸತ್ಯವ ನುಡಿವುದೇ ಸತ್ಯಲೋಕ'–'ಮಿಥ್ಯವ ನುಡಿವುದೇ ಮರ್ತ್ಯಲೋಕ' – 'ಚಿತ್ತ ಮನ ಬುದ್ಧಿ ಒಂದಾಗಿ ಮೆಚ್ಚು ಬಿಚ್ಚಿ ಬೇರಾಗ ದಿರಬೇಕು.'

ಜೀವ ಯಾವಾಗ ಸರ್ವಜೀವರುಗಳ ಬಗ್ಗೆ ಅವ್ಯಾಜ ಕರುಣೆ ತಾಳುವನೋ, ದಯೆ ಯಾವಾಗ ಅವನ ಬಾಳಿನ ರಥದ ಸಾರಥ್ಯ ವಹಿಸುವುದೋ ಆಗ ಅದು ಮುಂದಡಿಯಿಡುತ್ತದೆ.

"ದಯೆಯಿಲ್ಲದ ಧರ್ಮವಾವುದಯ್ಯಾ ?
ದಯುವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ
ದಯುವೇ ಧರ್ಮದ ಮೂಲವಯ್ಯಾ
ಕೂಡಲ ಸಂಗಯ್ಯನಂತಲ್ಲದೊಲ್ಲನಯ್ಯ"

ವೀರಶೈವ ವಚನಕಾರರು ನಡೆನುಡಿಗಳ ಸಮನ್ವಯಕ್ಕೆ ವಿಶೇಷ ಮಹತ್ವ ಕೊಟ್ಟರು. ಜ್ಞಾನದ ಮಹತ್ವವನ್ನು ಸಾರಿದ ಈಶಾವಾಸ್ಯೋಪನಿಷತ್ತು ಅದಕ್ಕೆ ಕರ್ಮದ ಕ್ರತುಶಕ್ತಿಬೇಕೆಂದು ಹೇಳಿತು. ತಪ್ಪು ಸರಿ, ಅದ್ಯಾನಾದ್ಯ, ಯುಕ್ತಾಯುಕ್ತಗಳ ಅಂತರವನ್ನು ಮನುಷ್ಯ, ಬುದ್ಧಿಯ ಬಲದಿಂದ ತಿಳಿದರೆ ಸಾಲದು. ತಾನು ತಿಳಿದುದನ್ನು, ಆಡುವುದನ್ನು ಕಾರ್ಯರೂಪಕ್ಕೆ ತರಬೇಕು. ನುಡಿ ಚೆನ್ನಾಗಿರುವಂತೆ ನಡೆಯೂ ಚೆನ್ನಾಗಿರಬೇಕು!'

ಮಾನವನ ಔನ್ನತ್ಯವನ್ನು ಸ್ಥಾಪಿಸಿ, ಅವನು ತನ್ನ ನಿಜವನ್ನರಿಯುವುದಕ್ಕೆ ಹಲವು ವಿಧದಲ್ಲಿ ನೆರವಾದುದು ವೀರಶೈವ ಸಾಹಿತ್ಯದ ಹಿರಿಮೆ.

ಮಾನವ ಕಲ್ಯಾಣವನ್ನೇ ಮುಖ್ಯಗುರಿಯನ್ನಾಗಿಟ್ಟುಕೊಂಡುದರಿಂದ ಈ ಸಾಹಿತ್ಯದಲ್ಲಿ ಪಂಡಿತಪ್ರಿಯವಾದ ಮಹಾಕಾವ್ಯಗಳು ಹೆಚ್ಚು ಹುಟ್ಟಲಿಲ್ಲ. ರಸವೈವಿಧ್ಯಕ್ಕಿಂತ ವಿಚಾರವೈಭವಕ್ಕೆ ವೀರಶೈವ ಸಾಹಿತ್ಯ ಹೆಚ್ಚು ಲಕ್ಷ್ಯ ಕೊಟ್ಟಿತು.

ಸಾಹಿತ್ಯವನ್ನು ಜನಪದದ ಮನೆಗೆ ತಂದುಕೊಟ್ಟ ಕೀರ್ತಿ ವೀರಶೈವ ಸಾಹಿತ್ಯದ್ದು. ಜನಪದದ ರೂಢಿ ಛಂದಸ್ಸುಗಳಾದ ಸಾಂಗತ್ಯ, ರಗಳೆ, ತ್ರಿಪದಿ, ಷಟ್ಪದಿಗಳನ್ನೇ ವೀರಶೈವ ಕವಿಗಳು ಹೆಚ್ಚಾಗಿ ಬಳಸಿಕೊಂಡಿದ್ದಾರೆ. ಗಹನವಾದ ತತ್ವಗಳನ್ನೂ ಸಾಮಾನ್ಯರಿಗೆ ಅರ್ಥವಾಗುವ ರೀತಿ ಹೇಳಲು ಪ್ರಯತ್ನಿಸಿದ್ದಾರೆ.

ಏಕದೇವನಲ್ಲಿ ಅನನ್ಯ ಭಕ್ತಿ, ಲೋಕದ ಹಿರಿಯತನದ ಬಗ್ಗೆ ತಿರಸ್ಕಾರ, ಪಾರ್ಥಿವ ವಿಷಯಗಳ ಬಗ್ಗೆ ಅಮನಸ್ಕತೆ, ಇಹ ಜೀವನವನ್ನೇ ಅನಂತ

ಜೀವನವನ್ನಾಗಿ ಮಾಡುವ ರಸಕ್ರಿಯೆಗಳ ಬಗ್ಗೆ ವೀರಶೈವ ಸಾಹಿತ್ಯ ವಿಶೇಷ ಬೆಳಕು ಚೆಲ್ಲಿದೆ.

ಜಗತ್ತಿನ ಅನುಭವ ಸಾಹಿತ್ಯಕ್ಕೆ ವೀರಶೈವ ವಚನಕಾರರು ನೀಡಿರುವ ಕಾಣಿಕೆ ಅನ್ಯಾದೃಶವಾದುದು. ಸೇಂಟ್ ಫ್ರಾಂಸಿಸ್ ಆಫ್ ಅಸಿಸಿ, ಥಾಮಸ್ ಅಕೆಂಪಿಸ್, ಬ್ಲೇಕ್, ಮನ್‌ಸೂರ್, ಸನಾಯ್, ಕಬೀರ್, ಮೊದಲಾದ ಅನುಭವಿಗಳ ಉದಾತ್ತ ನಡೆನುಡಿಯ ಪ್ರತಿರೂಪವನ್ನು ವೀರಶೈವ ವಚನಕಾರರಲ್ಲಿ ಕಾಣಬಹುದು.

ವೀರಶೈವ ವಚನ ಸಾಹಿತ್ಯವನ್ನು ಅನುಭವ ಸಾಹಿತ್ಯವೆಂದೇ ನೋಡಿ, ಆ ಮಾನದಂಡದಿಂದಲೇ ಬೆಲೆ ಕಟ್ಟಬೇಕಲ್ಲದೆ ವೀರಶೈವರ ಸಾಹಿತ್ಯ ಎಂಬ ಸಂಕುಚಿತ ಭಾವನೆಯಿಂದ ನೋಡಬಾರದು. ಈ ಸಾಹಿತ್ಯ ವೀರಶೈವರಿಗೆ ಎಷ್ಟು ಆವಶ್ಯಕವೋ ಅಷ್ಟೇ ಜಿಜ್ಞಾಸುಗಳಿಗೂ, ಅನುಭವಿಗಳಿಗೂ ಆವಶ್ಯಕವಾಗಿದೆ.

---

# ೧೦. ಅಲ್ಲಮಪ್ರಭು

## ೧

ಜಗತ್ತಿನಮೇಲೆ ಕಾಲಕಾಲಕ್ಕೆ ಮುಸುಕುವ ಗಾಂಡಾಂಧಕಾರವನ್ನು ಪರಿಹರಿಸಲು, ಕಾಲಕಾಲಕ್ಕೆ ಸಂಗ್ರಹವಾಗುವ ಕೊಳೆಯನ್ನು ತೊಳೆಯಲು ಅವತರಿಸುವ ಮಹಾತ್ಮರಲ್ಲಿ ಅಲ್ಲಮಪ್ರಭುವೂ ಒಬ್ಬನಾಗಿದ್ದಾನೆ. ಆತನ ಜೀವನದ ಕಾಯಕ ಅತ್ಯಂತ ಕಷ್ಟಸಾಧ್ಯವಾದುದಾಗಿತ್ತು. ಒಣ ನೈತಿಕೋಪ ದೇಶಗಳಿಂದ ಜನತೆಗೆ ತಾತ್ಕಾಲಿಕ ಸುಖ, ಶಾಂತಿಯನ್ನು ಕೊಡಲು ಅವನು ಪ್ರಯತ್ನಪಡಲಿಲ್ಲ. ಅಲ್ಲಮ ಶಾಂತಿವಿಚ್ಛೇದಕನಾಗಿದ್ದನೇ ವಿನಾ ಶಾಂತಿ ಪ್ರಸಾರಕನಾಗಿರಲಿಲ್ಲ. ಜನತೆಯ ಅಸೀಮ ಆಲಸ್ಯಕ್ಕೆ ಚಾವಟಿಯ ಪೆಟ್ಟು ಕೊಟ್ಟು, ಅವರಲ್ಲಿ ಅಂತರ್ಗತವಾಗಿದ್ದ ಚೇತನವನ್ನು ಜಾಗೃತಗೊಳಿಸಿ, ಫಲದಾಯಕವಾದ ಕ್ರಿಯೆಯ ಕಡೆಗೆ ಅವರ ಮನಸ್ಸನ್ನು ಸೆಳೆದ ಕೀರ್ತಿ ಅಲ್ಲಮಪ್ರಭುವಿನದು.

ಇತರ ಮತ ಸಂಸ್ಥಾಪಕರಿಗೂ ಅಲ್ಲಮನಿಗೂ ಅಜಗಜಾಂತರ ವ್ಯತ್ಯಾಸ ವಿದೆ. ಅವನು ಮತಸ್ಥಾಪನೆಗೆ ಮನಸ್ಸುಕೊಡಲಿಲ್ಲ. ತಾವು ಬೋಧಿಸಿದ, ಅನುಸರಿಸಿದ ಮಾರ್ಗಗಳೇ ಸರ್ವಶ್ರೇಷ್ಠವಾದುವೆಂದು ಇತರರು ಸಾರಿದ ಹಾಗೆ ಅವನು ಸಾರಲಿಲ್ಲ. ಆತ್ಮಜ್ಞಾನಸಾದನೆಗೆ ಪೋಷಕವಾಗುವ ಎಲ್ಲ ಸಾಧನಮಾರ್ಗಗಳೂ ಶ್ರೇಷ್ಠವಾದುವೆಂದು ಅವನು ಹೇಳಿದುದಲ್ಲದೆ, ಸರ್ವಧರ್ಮ ಸಮನ್ವಯ ಮಾಡುವ ತತ್ತ್ವಗಳನ್ನು ಅವಿಶ್ರಾಂತನಾಗಿ ಪ್ರಸಾರಮಾಡಿದ. ಮಾನವನನ್ನು ಪರಿಪೂರ್ಣನನ್ನಾಗಿ ಮಾಡಲು ವಾಗ್ದಾನ ಮಾಡುತ್ತಿದ್ದ ಎಲ್ಲ ತತ್ತ್ವಗಳನ್ನು ಅವನು ಶ್ರೀ ರಾಮಕೃಷ್ಣ ಪರಮಹಂಸ ರಂತೆ ಪ್ರಯೋಗ ಮಾಡಿ ನೋಡಿ ಅವುಗಳ ಪರಿಮಿತಿಯನ್ನರಿತುಕೊಂಡ. ಆತ್ಮಪ್ರಗತಿಗೆ ಸಲ್ಲದ ಮತಪದ್ಧತಿಗಳನ್ನೂ ಧಾರ್ಮಿಕ ಆಚರಣೆಗಳನ್ನೂ ಅವನು ನಿರ್ದಯೆ, ನಿರ್ದಾಕ್ಷಿಣ್ಯದಿಂದ ಪ್ರತಿಭಟಿಸಿದ. ಅವನ ಸಿಡಿಲು

ನುಡಿಯ ಹಿಂದೆ ಕುಸುಮ ಕೋಮಲವಾದ ಅಂತಃಕರಣವಿದೆ. ಸದಾ ಮಗುವನ್ನು ಆಕ್ಷೇಪಿಸಿ ತಿದ್ದುವ ತಾಯಿಯ ನಡೆಯಂತಿದೆ ಅವನ ನುಡಿ. 'ಆತ್ಮನಿರ್ಮಾಪಕ'ರನ್ನು ರೂಪಿಸುವ ಟಂಕಸಾಲೆ ಅಲ್ಲಮಪ್ರಭು, ಅವನ ಸಮಕಾಲೀನರಾಗಿದ್ದ ಅನೇಕ ಸತ್ಪುರುಷರಿಗೂ ಈ ಪರೀಕ್ಷೆ ತಪ್ಪಲಿಲ್ಲ.

ಪ್ರಭುವಿನ ಜೀವನ ಸಂಧಿಗ್ಧಸಂಪುಟದಲ್ಲಿ ಅಡಗಿ ಕುಳಿತಿದೆ. ಪವಾಡಗಳ ಮಾಲೆಯನ್ನು ನೇಯ್ದಿರುವ ಪುರಾಣ ಕಥೆಗಳಂತೂ ಅನಿರ್ವಾಹವಾಗಿ ಇದ್ದೇ ಇವೆ. ಮಧ್ಯಕಾಲದ ಭಾರತೀಯರಿಗೆ ವೈಜ್ಞಾನಿಕ ಮನೋಭಾವದಿಂದ ಜೀವನ ಚರಿತ್ರೆ ಬರೆಯಬೇಕೆಂಬ ಪರಿಜ್ಞಾನವಿರಲಿಲ್ಲ. ಧರ್ಮ ಧುರೀಣರ ಚರಿತ್ರೆಗಳು ಅವರನ್ನು ಮಹಾಮೇರುವಿಗೊಯ್ದು, ಶಿವನ ಸಂಗಡಿಗರನ್ನಾಗಿ ಮಾಡಿವೆ. ಶೈವ ಸಂತರು ಶಿವನ ಸಾಕಾರಮೂರ್ತಿಗಳಾಗಿದ್ದಾರೆ; ವೈಷ್ಣವ ಸಂತರು ವಿಷ್ಣುವಿನ ಪ್ರತಿನಿಧಿಗಳಾಗಿದ್ದಾರೆ. ಶೈವ, ವೈಷ್ಣವ ಸಂತರ ವಿಷಯದಲ್ಲಿ ಹುಟ್ಟಿಕೊಂಡಿರುವ ವಿಪುಲ ಸಾಹಿತ್ಯವನ್ನು ಕೆದಕಿ ನೋಡಿದರೆ ಗುಲಗಂಜಿಯಷ್ಟೂ ಐತಿಹಾಸಿಕ ಸಂಗತಿಗಳು ತಿಳಿದುಬರುವುದಿಲ್ಲ. ವ್ಯಕ್ತಿ, ವಸ್ತುಗಳ ಮೂರ್ತಿವಂತ ಸತ್ಯಚರಿತ್ರೆಯನ್ನವಲೋಕಿಸಿ ಅವುಗಳನ್ನು ಐತಿಹಾಸಿಕ ಹಿನ್ನೆಲೆಯಲ್ಲಿ ಪರೀಕ್ಷಿಸುವ ಪರಿಪಾಠ ಮಧ್ಯಕಾಲದ ಲೇಖಕರಲ್ಲಿ ಬೆಳೆಯಲಿಲ್ಲ. ಪ್ರಾಮಾಣಿಕ ವಿಷಯ ವಿವೇಚನೆಗೆ ಹೊರಡುವ ಆಧುನಿಕ ಸತ್ಯಾರ್ಥಿಗೆ ಈ ಅಭ್ಯಾಸ ಅಸಂಖ್ಯಾತ ಅಡ್ಡಿ ಆತಂಕಗಳನ್ನು ತಂದೊಡ್ಡಿದೆ. ಸಂಪ್ರದಾಯದ ವ್ಯಾಘ್ರನಖದ ಕೈಗೆ ಸತ್ಯಾರ್ಥಿಯ ಸ್ವಾತಂತ್ರ್ಯ ಸಿಕ್ಕಿಬಿದ್ದು ತೊಳಲಾಡುತ್ತಿದೆ. ವಿಮರ್ಶಾತ್ಮಕ ಶೋಧನಕಾರ್ಯ ಧರ್ಮಬಾಹಿರವಾಗಿದೆ. ವಿದ್ವತ್‌ರಂಗದಲ್ಲಿ ಕಾಣಬರುವ ನಿಷ್ಕಾಮಪಾಂಡಿತ್ಯ ನಾಸ್ತಿಕತೆಯ ಕುರುಹಾಗಿ ಬಿಟ್ಟಿದೆ.

ವೈಜ್ಞಾನಿಕ ಶೋಧಕ್ಕೆ ಅಡ್ಡಿಬರುತ್ತಿರುವ ಮತ್ತೊಂದು ಕಾರಣವೆಂದರೆ ಧರ್ಮಾನುಯಾಯಿಗಳ ಕಟುಧಾರ್ಮಿಕ (Fanatic) ಮನೋಭಾವ. ಆಯಾಧರ್ಮಗಳಲ್ಲಿ ಜನ್ಮತಳೆದವರೇ ಆಯಾ ಧರ್ಮಗಳನ್ನು ಕುರಿತು ಪ್ರಸ್ತಾಪಿಸಬೇಕು ಎನ್ನುವ ದುರಭಿಮಾನ. ಕೃಷ್ಣ, ಅಲ್ಲಮ, ಮಹಮ್ಮದ್, ಯೇಸು, ಶ್ರೀ ರಾಮಕೃಷ್ಣರು ಶಿಷ್ಯರೆನಿಸಿಕೊಂಡವರ ಸರ್ವಾಧಿಕಾರಕ್ಕೆ-ಮಾಲ್ಕಿಹಕ್ಕಿಗೆ ತಮ್ಮ ಬೋಧೆ ಒಳಗಾಗಬೇಕೆಂದು ಎಂದೂ ಉದ್ದೇಶ

ಪಡಲಿಲ್ಲ. 'ಮುಟ್ಟಿದರೆ ಮುನಿಯುವ' ಈ ಮನೋಭಾವನೇ ಧರ್ಮಾನು ಯಾಯಿಗಳಲ್ಲಿಯೂ ಇತರರಲ್ಲಿಯೂ ಅಸೀಮ ಅಜ್ಞಾನ, ಅಂಧಕಾರ ಬೆಳೆಯುವುದಕ್ಕೆ ಬುನಾದಿ ಹಾಕಿತು. ಈ ಸರ್ವಸ್ವಾಮ್ಯ, ಸರ್ವಾಧಿಕಾರ ಮನೋಭಾವವನ್ನೆದುರಿಸಿ ಮಹಾಪುರುಷರ ಬೋಧೆಯ ಅಮೃತಸರಸ್ಸಿನಿಂದ ಧಾರಾಳವಾಗಿ ಅವರ ಪುಣ್ಯಪೀಯೂಷವನ್ನೊಯ್ದು ಜಗತ್ತಿಗೆ ಹಂಚುವ ಅಧಿಕಾರ ಎಲ್ಲ ವಿವೇಚನಾಶಾಲಿಗಳಿಗೂ ಇದೆ.

ಹರಿಹರ, ಚಾಮರಸ ಕವಿಗಳು ಅಲ್ಲಮನ ಮೇಲೆ ಕಾವ್ಯಗಳನ್ನು ಬರೆದಿದ್ದಾರೆ. ಅವನು ಈಶ್ವರಸಂಭೂತನೆಂದು ಇಬ್ಬರೂ ಹೇಳುತ್ತಾರೆ. ಬಡತನದಲ್ಲಿಯೇ ಹುಟ್ಟಿಬೆಳೆದ ಅಲ್ಲಮ ತನ್ನ ಹುಟ್ಟೂರನ್ನು ಬಿಟ್ಟು ಆಗ ಪ್ರಖ್ಯಾತ ರಾಜಧಾನಿಯಾಗಿದ್ದ ಬನವಸೆಗೆ ಬರುತ್ತಾನೆ. ಅಲ್ಲಮ ನಟುವರ ಜಾತಿಯಲ್ಲಿ ಹುಟ್ಟಿದವನೆಂದೂ ಮೃದಂಗವಾದ್ಯವಾದನವೇ ಅವನ ವೃತ್ತಿ ಯಾಗಿತ್ತೆಂದೂ ತಿಳಿದುಬರುತ್ತದೆ. ಬನವಸೆಯಂಥ ದೊಡ್ಡ ಪಟ್ಟಣದಲ್ಲಿ ತನ್ನ ಕಲೆಗೆ ತಕ್ಕ ಪ್ರೋತ್ಸಾಹ ಸಿಕ್ಕಬಹುದೆಂದೇ ಅವನು ಬಂದಿರಬೇಕು. ಊರಿನ 'ಮಧುಕೇಶ್ವರ ದೇವಾಲಯ'ದಲ್ಲಿ ಮೃದಂಗ ಕಾಯಕಮಾಡುವ ಅವಕಾಶ ಅಲ್ಲಮನಿಗೆ ಸಿಕ್ಕಿತು. ದೇವತಾರ್ಚನೆಗೆ ಬಂದ ಊರಿನ ದೊರೆ ಮಮಕಾರನ ಮಗಳಾದ ಮಾಯೆ, ಅಲ್ಲಮನಲ್ಲಿ ಮೋಹಗೊಂಡು, ತನ್ನ ಸಖೀಜನರ ನೆರವಿನಿಂದ ಅವನನ್ನು ಅರಮನೆಗೆ ಬರಮಾಡಿಕೊಳ್ಳುತ್ತಾಳೆ. ಅಲ್ಲಮ ಅವಳ ಗುರುವಾಗುತ್ತಾನೆ, ತರುವಾಯ ಪ್ರಿಯತಮನಾಗುತ್ತಾನೆ. ಅಲ್ಲಮ ಈ ಜೀವನವನ್ನು ಸಂತೋಷವಾಗಿ ಅಪ್ಪಿಕೊಂಡು ಸುಖವಾಗಿರು ತ್ತಾನೆ. ಒಂದು ದುರ್ದಿನ (ಸುದಿನವೆನ್ನೋಣವೇ!) ಮಾಯೆ ಮೃತ ಪಡುತ್ತಾಳೆ. ದಾರುಣ ದುಃಖಪೀಡಿತನಾದ ಅಲ್ಲಮ ತನ್ನ ಪ್ರೇಯಸಿಯ ವಿಯೋಗದಿಂದ ಭ್ರಾಂತನಾಗಿ ಬನವಸೆಯನ್ನು ಬಿಟ್ಟು ದೇಶಾಂತರ ಹೊರಟು ಬಿಡುತ್ತಾನೆ.

ಸಾಂಪ್ರದಾಯಕವಾದ ಈ ಕಥೆಗೆ ಬೇರೆಬೇರೆ ರೂಪಗಳೂ ಇವೆ. ಶಿವ ಪಾರ್ವತಿಯರಿಗೆ, ಕೈಲಾಸದಲ್ಲಿ ನಡೆದ ಪೈಜೆಯ ಫಲವಾಗಿ ಲೋಕಮಾತೆ ತನ್ನ ತಾಮಸ ಕಳೆಯಿಂದ 'ಮಾಯೆ'ಯೆಂಬ ಒಬ್ಬ ಕನ್ಯಾಮಣಿಯನ್ನು ಸೃಜಿಸಿ ಭೂಲೋಕಕ್ಕೆ ಕಳಿಸಿಕೊಡುತ್ತಾಳೆ. ಮಾಯೆಯ ನಿರಸನ ಮಾಡಲು

ಪರಮೇಶ್ವರ ತನ್ನ ಸಾತ್ವಿಕಕಳೆಯಿಂದ 'ಅಲ್ಲಮ'ನನ್ನು ಸೃಜಿಸಿ ಭೂಲೋಕಕ್ಕೆ ಕಳಿಸಿಕೊಡುತ್ತಾನೆ. ಮಮಕಾರಭೂಪಾಲನ ಮಗಳಾಗಿ ಹುಟ್ಟಿದ ಮಾಯೆ, ಅಲ್ಲಮನನ್ನು ಆಕರ್ಷಿಸಲೆತ್ನಿಸಿ ವಿಫಲಳಾಗುತ್ತಾಳೆ. ಅವನ ನಿರ್ದೇಹತ್ವ ಕಂಡು ಅವಳಿಗೆ ಕೌತುಕವಾಗುತ್ತದೆ. ಅಲ್ಲಮನ ದಿವ್ಯ ಸೌಂದರ್ಯಕ್ಕೆ ಮನಸೆತ್ತ ಮಾಯೆ ರಾಜಭೋಗವನ್ನು ತ್ಯಜಿಸಿ ಅವನ ಒಲವನ್ನು ದೊರಕಿಸಿ ಕೊಳ್ಳಲು ಅವನನ್ನೇ ಅನುಸರಿಸುತ್ತಾಳೆ. ತನ್ನ ಪ್ರಯತ್ನದ ನಿರರ್ಥಕತೆಯನ್ನು ಕಂಡುಕೊಂಡ ಮಾಯೆ ಕೊನೆಗೆ ಸೋಲನ್ನೊಪ್ಪಿಕೊಂಡು ಕೈಲಾಸಕ್ಕೆ ತೆರಳುತ್ತಾಳೆ. ಈ ಕಥಾನುಸರಣೆ ಚಾಮರಸ ಕವಿಯಿಂದ ಹುಟ್ಟಿದ್ದು. ಹದಿನೈದನೆಯ ಶತಮಾನದಲ್ಲಿ ಚಾಮರಸ, ನೂರೊಂದು ವಿರಕ್ತರು, ಮತ್ತಿತರ ವೀರಶೈವ ಲೇಖಕರು ಮುರಿದು ಬೀಳುತ್ತಿದ್ದ ವೀರಶೈವ ಪಂಥವನ್ನು ಮೇಲಕ್ಕೆತ್ತಿ ನವಜಾಗೃತಿಯನ್ನುಂಟುಮಾಡಲು ಪ್ರಯತ್ನಿಸಿದರು. ತಮ್ಮ ಉದ್ದೇಶಸಾಧಿಸಲು ಧರ್ಮಚರಿತ್ರೆಯ ಅನೇಕ ಅಂಶಗಳನ್ನು, ಶರಣರ ಚರಿತ್ರೆಗಳ ಅನೇಕ ಸಂಗತಿಗಳನ್ನು ಮಾರ್ಪಡಿಸಿ, ಅವುಗಳನ್ನು ತಮ್ಮ ಧ್ಯೇಯಾನುಗುಣವಾಗಿ ಪುನರ್ನಿರ್ಮಾಣಮಾಡಿದರು. ಮಾಯೆಯ ಪ್ರೇಮ ಬಂಧನಕ್ಕೆ ಅಲ್ಲಮ ಸಿಕ್ಕಿದನೆಂದು ತೋರಿಸುವುದು ಚಾಮರಸನಿಗೆ ಸಮ್ಮತ ವಾಗಲಿಲ್ಲ. ಪರಮೇಶ್ವರನ ಪ್ರತಿನಿಧಿಯಾದ ಅಲ್ಲಮ ಮಾಯೆಯ ಕುಟಿಲ ಕುಹಕಗಳಿಗೆ ಬಲಿಯಾಗುವುದು ಸಾಧ್ಯವೇ ? ಚಾಮರಸನ ಮೊದಲಿಗನಾದ ಹರಿಹರ ಈ ಸನ್ನಿವೇಶ ಹಾಗೂ ಅಲ್ಲಮನ ಜೀವಿತದ ಇತರ ಸನ್ನಿವೇಶಗಳ ಬಗ್ಗೆ ಸತ್ಯಸಂಗತಿಗಳನ್ನು ವಿವರಿಸಲು ಹಿಂಜರಿದಿಲ್ಲ. ಹರಿಹರ ಐತಿಹಾಸಿಕ ಪ್ರಾಮಾಣಿಕತೆಗೆ ಬೆಲೆಗೊಟ್ಟು ಸಂಪ್ರದಾಯವನ್ನು ಮೀರಿನಿಂತ; ಚಾಮರಸ ಸಂಪ್ರದಾಯದ ತೃಪ್ತಿಗೆ ಐತಿಹಾಸಿಕ ಪ್ರಾಮಾಣಿಕತೆಯನ್ನು ಬಲಿಗೊಟ್ಟ.

ಮಾಯೆಯ ಪ್ರಕರಣ ಮುಗಿದ ಮೇಲೆ ಅಲ್ಲಮ ಮಾನವ ಜೀವಿತದ ಪಾರ್ಥಿವತೆಯನ್ನು ಕಂಡುಕೊಂಡು 'ಅಮರತ್ವ'ವನ್ನರಸುತ್ತ ಹೋಗುತ್ತಾನೆ. ಈ ಕಾಲದಿಂದ ಹನ್ನೆರಡು ವರ್ಷಗಳಕಾಲ ಅವನ ಬಾಳು ಹೇಗೆ ಸಾಗಿತೆಂಬುದು ನಮಗೆ ತಿಳಿದುಬಂದಿಲ್ಲ. ವೀರಶೈವ ಕಾವ್ಯ, ಇತಿಹಾಸ, ಪುರಾಣಗಳು ಯಾವದೂ ಈ ವಿಷಯದ ಮೇಲೆ ಬೆಳಕು ಚೆಲ್ಲಿಲ್ಲ. ಭಾರತದ ನಾಲ್ಕು ಮೂಲೆಗಳಲ್ಲಿಯೂ ಪ್ರವಾಸಮಾಡಿ, ಅನೇಕ ಸಂತರನ್ನು,

ಸಾಧಕರನ್ನೂ, ಮಾಯೆಯ ಗೆಲ್ದವರನ್ನು ಕಂಡು ಅವರ ಸೇವೆ ಶುಶ್ರೂಷೆ ಮಾಡಿ ಜ್ಞಾನಸಿದ್ಧಿಯನ್ನು ಪಡೆದುಕೊಂಡು, ಧರ್ಮದ ವಿವಿಧ ಮುಖಗಳನ್ನು ನೋಡಿ ಅವುಗಳ ಏಕಸೂತ್ರ ಯಾವುದೆಂಬುದನ್ನು ಅರಿತುಕೊಂಡು ಅವನು 'ಪ್ರಭು'ವಾದನೆಂದು ನಾವು ಊಹಿಸಬಹುದು.

ಅವನು ನಮಗೆ ಮುಂದೆ ದರ್ಶನ ಕೊಡುವುದು ಪ್ರೇಮಭಂಗವನ್ನನುಭವಿಸಿದ ತರುಣನಾಗಿಯಲ್ಲ; ಆತ್ಮತೇಜದಿಂದ ವಿರಾಜಿಸುತ್ತಿರುವ ಮಹಾಪುರುಷನಾಗಿ. ತನ್ನ ಧರ್ಮದಿಗ್ವಿಜಯವನ್ನಾರಂಭಿಸಿ ಅಲ್ಲಮ ಪ್ರಭು ಸೊನ್ನಲಿಗೆಗೆ (ಈಗಿನ ಸೊಲ್ಲಾಪುರ) ಬರುತ್ತಾನೆ. ಅನೇಕ ಶಕ್ತಿಗಳನ್ನು ವಶಮಾಡಿಕೊಂಡು, ಸೇವೆಯಲ್ಲಿ ನಿರತನಾಗಿದ್ದ ಸಿದ್ಧರಾಮಯೋಗಿಯನ್ನು ಅಲ್ಲಿ ಸಂಧಿಸುತ್ತಾನೆ. ಸಿದ್ಧರಾಮ, ಅಲ್ಲಮರ ಮಧ್ಯೆ ನಡೆದ ಮಾತುಕತೆ, ಸೆಣಸಾಟವನ್ನು ಚಾಮರಸ ನಾಟಕೀಯವಾಗಿ ವರ್ಣಿಸಿದ್ದಾನೆ. ಚಾಮರಸನ ವರ್ಣನೆಯಂತೆ ಅಲ್ಲಮ, ಸಿದ್ಧರಾಮರು ಜಟ್ಟಿಗಳಂತೆ ಹೋರಾಡುತ್ತಾರೆ. ಕೊನೆಗೆ ಅಲ್ಲಮನಿಗೆ ಪೂರ್ಣವಿಜಯ ದೊರಕುತ್ತದೆ.

ಚಾಮರಸನ ಮೊದಲಿಗನಾದ ರಾಘವಾಂಕ ಈ ವಸ್ತುವಿನ ಸ್ವೈಸರ್ಗಿಕ ನಿರೂಪಣೆ ಕೊಟ್ಟು ಉಪಕಾರ ಮಾಡಿದ್ದಾನೆ. ಆತ್ಮೋತ್ಕ್ರಾಂತಿಯ ಕೊನೆಯ ಮೆಟ್ಟಿಲನ್ನು ಮುಟ್ಟಿದ್ದ ಸಿದ್ಧರಾಮ, ತನ್ನ ಜ್ಞಾನಸಿದ್ಧಿಯನ್ನು ಲೋಕಕ್ಕೆ ಧಾರೆಯೆರೆಯದೆ, ಕರ್ಮಕದಳಿಯಲ್ಲಿ ತೊಳಲಾಡುತ್ತಿರುವುದನ್ನು ಕಂಡು ಅಲ್ಲಮನಿಗೆ ವಿಷಾದವಾಗುತ್ತದೆ. ಈ ಬಗೆಯ ಸೇವೆಯಿಂದ ಪ್ರಯೋಜನವಿಲ್ಲವೆಂದು ಪ್ರಭು ಸಿದ್ಧರಾಮನಿಗೆ ಉಪದೇಶಿಸುತ್ತಾನೆ ಹಸಿವು, ತೃಷೆಯಿಂದ ಪೀಡಿತರಾದ ಜಗದ ಜೀವಿಗಳಿಗೆ ಅಲ್ಪ ಸಹಾಯ ನೀಡಿದರೂ ತನ್ನ ಜನ್ಮ ಸಾರ್ಥಕವಾಯಿತೆಂದು ಸಿದ್ಧರಾಮ ಉತ್ತರ ಕೊಡುತ್ತಾನೆ. ಜೀವನದ ಋಜುತತ್ವವನ್ನು ಸಿದ್ಧರಾಮನಿಗೆ ಉಪದೇಶಮಾಡಿ, ಅವನನ್ನು ಜತೆಯಲ್ಲಿ ಕರೆದುಕೊಂಡು ಕಲ್ಯಾಣದತ್ತ ಹೊರಡುತ್ತಾನೆ.*

---

* ಈ ಸನ್ನಿವೇಶವನ್ನು 'ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ' ಗ್ರಂಥದಲ್ಲಿ (ಪುಟ ೧೮-ಪ್ರಥಮಾವರ್ತಿ) ನಾನು ವಿವರಿಸಿದ್ದೇನೆ.

ಅಲ್ಲಮ ಕೊಲ್ಹಾಪುರಕ್ಕೆ ಬಂದಾಗ ಅಲ್ಲಿ ಅವನು ಗೋರಕ್ಷನಾಥ* ನನ್ನು ಸಂಧಿಸುತ್ತಾನೆ. ಅಲ್ಲಮನಿಗೂ, ಗೋರಕ್ಷನಾಥನಿಗೂ ವಾದ ವಿವಾದ ವಾಗುತ್ತದೆ. ಅಲ್ಲಮ ಗೋರಕ್ಷನಾಥನ ವಾಮಾಚಾರಗಳನ್ನು ಖಂಡಿಸುತ್ತಾನೆ.

"ಅಗ್ನಿಸ್ತಂಭದ ರಕ್ಷೆಯುದ್ದು ಮನೆಬೆಂದಿತ್ತಯ್ಯ.
ಬಲಮುರಿಯ ಶಂಖವಿದ್ದು ಪದ ಹೋಯಿತ್ತಯ್ಯಾ.
ಏಕಮುಖದ ರುದ್ರಾಕ್ಷಿ ಇದ್ದು ವಿಘ್ನವಾಯಿತ್ತಯ್ಯಾ.
ಇವೆಲ್ಲವ ಸಾಧಿಸಿದರೆ ಏನೂ ಇಲ್ಲದಂತಾಯಿತು ಗುಹೇಶ್ವರ."

ಗೋರಕ್ಷನಾಥ ಅಲ್ಲಮನನ್ನು ಪ್ರತಿಭಟಿಸಿ, ಎದುರಿಗಿದ್ದ ಕತ್ತಿಯನ್ನು ಅವನ ಕೈಗಿತ್ತು 'ನನ್ನ ದೇಹದ ಮೇಲೆ ಹೊಡಿ' ಎನ್ನುತ್ತಾನೆ. ಅಲ್ಲಮ ಬೀಸಿದ ಕತ್ತಿ ಪುಡಿಪುಡಿಯಾಗುತ್ತದೆ. ಅಲ್ಲೇ ಇದ್ದ ಇನ್ನೊಂದು ಕತ್ತಿಯನ್ನು ತೆಗೆದುಕೊಂಡು ತನ್ನ ಮೇಲೆ ಪ್ರಯೋಗಿಸೆಂದು ಅಲ್ಲಮ ಹೇಳುತ್ತಾನೆ. ಗೋರಕ್ಷನಾಥ ಬೀಸಿದ ಕತ್ತಿ, ದೇಹದ ಅಸ್ತಿತ್ವವಿಲ್ಲದ ಶೂನ್ಯದಲ್ಲಿ ಸಂಚರಿಸುತ್ತದೆ. ಆಗ 'ಅಲ್ಲಮ ದೇಹವನ್ನು ಭದ್ರಗೊಳಿಸಿ ,ಅದು ನಾಲ್ಕು ದಿನ ಹೆಚ್ಚಾಗಿ ಜೀವ ಧರಿಸುವಂತೆ ಮಾಡುವುದು ಜಾಣತನವಲ್ಲ. ಪಾರ್ಥಿವ ದೇಹವನ್ನು ವಜ್ರದೇಹವನ್ನಾಗಿ ಮಾಡುವುದರ ಬದಲು ಅದನ್ನು ನಿರ್ದೇಹವನ್ನಾಗಿಸಿ, ಮಾಯಾ ಮಲಗಳನ್ನು ಗೆಲ್ಲಬೇಕು' ಎಂದು ಗೋರಕ್ಷನಾಥನಿಗೆ ಉಪದೇಶಮಾಡಿ ಅವನನ್ನು ಶಿಷ್ಯನನ್ನಾಗಿ ಪರಿಗ್ರಹಿಸುತ್ತಾನೆ.

ಕಲ್ಯಾಣದಲ್ಲಿ ಬಸವಣ್ಣನವರು 'ಅನುಭವ ಮಂಟಪ' ಸ್ಥಾಪಿಸಿಕೊಂಡು ಪ್ರಭುವಿನಾಗಮನವನ್ನು ನಿರೀಕ್ಷಿಸುತ್ತಿರುತ್ತಾರೆ. ಅಲ್ಲಿಗೆ ಅಲ್ಲಮನ ಸ್ವಾರಿ ಬಿಜಯಗೈಯುತ್ತದೆ. ಲೋಕ ಬಸವಣ್ಣನವರನ್ನು ಜಗದಾದಿದೇಶಿಕನೆಂದು ಪೂಜಿಸುತ್ತಿದ್ದರೂ ಅವರನ್ನು ಪರೀಕ್ಷೆಗೊಳಗಾಗಿಸದೆ ಅಲ್ಲಮ ಒಪ್ಪಿಕೊಳ್ಳ

* ಈ ಗೋರಕ್ಷನಾಥನೂ ನಾಥಪಂಥಿಯನೇ. ಅದರೂ ಕೆಲವು ವಿಮರ್ಶಕರು ಅಭಿಪ್ರಾಯಪಟ್ಟಿರುವಂತೆ ಇವನು ಮಚ್ಛೇಂದ್ರಗುರುವಿನ ಶಿಷ್ಯನಾದ ಗೋರಕ್ಷನಾಥನಲ್ಲ. ಮಚ್ಛೇಂದ್ರನ ಶಿಷ್ಯನ ಗೋರಕ್ಷನಾಥ (ಅಥವಾ ಗೋರಖನಾಥ) ಇವನಿಗಿಂತಲೂ ಒಂದು ಶತಮಾನ ಹಿಂದಿನವನು. ಈ ಬಗ್ಗೆ ಹೆಚ್ಚು ವಿವರಗಳಿಗೆ ಅನುಬಂಧ-೧ ನೋಡಿ.

ಲೊಲ್ಲ. ಪೂಜಾ ನಿಮಗ್ನರಾಗಿದ್ದ ಬಸವಣ್ಣನವರನ್ನು ಕಂಡು ಪ್ರಭು ಮುನಿದು ಹೊರಡಲನುವಾಗುತ್ತಾನೆ, ಬಸವಣ್ಣನವರು ಧಾವಿಸಿ ಹೋಗಿ ಪ್ರಭುವಿನ ಪಾದ ಹಿಡಿದು ಕ್ಷಮೆ ಬೇಡುತ್ತಾರೆ. 'ಸ್ಥಾವರ ದೇವರನ್ನು ಪೂಜೆ ಮಾಡುವುದಕ್ಕಿಂತ ಜಂಗಮನಾಗಿರುವ ಮಾನವತೆಯನ್ನು ಪೂಜಿಸಬೇಕು' ಎಂದು' ಪ್ರಭು ಬಸವಣ್ಣನವರಿಗೆ ತಿಳಿಯ ಹೇಳುತ್ತಾನೆ.‡

ಪ್ರಭು ಸಿದ್ಧರಾಮನಿಗೂ ಬಸವಣ್ಣನವರಿಗೂ ಮಾಡಿದ ಉಪದೇಶ ಪರಸ್ಪರ ವಿರುದ್ಧವಾಗಿರುವಂತೆ ಕಂಡುಬರುತ್ತದೆ. ಬಸವಣ್ಣನವರಿಗೆ ಪ್ರಭು ಉಪದೇಶಿಸುವ 'ಮಾನವ ಸೇವೆ'ಯಲ್ಲಿಯೇ ಸಿದ್ಧರಾಮ ನಿರತನಾಗಿದ್ದುದು; ಬಸವಣ್ಣನವರಿಗೆ ಉಪದೇಶಿಸುವ 'ಪರಮೇಷ್ಠಿಯ ಪೂಜೆ'ಯಲ್ಲಿಯೇ ಸಿದ್ಧರಾಮ ನಿರತನಾಗಿದ್ದುದು. ಮಾನವ ಸೇವೆ ಸಿದ್ಧರಾಮನನ್ನು ಲೋಕ ಸಂಸಾರಿಯಾಗಿ ಮಾಡುತ್ತಿದ್ದುದೂ, ಬಸವಣ್ಣನವರನ್ನು ಅಂತರ್ಮುಖಿಯನ್ನಾಗಿ ಮಾಡುತ್ತಿದ್ದುದನ್ನು ಪ್ರಭುದೇವರ ಸೂಕ್ಷ್ಮಬುದ್ಧಿ ಗ್ರಹಿಸುತ್ತದೆ. ಇಬ್ಬರೂ 'ಸುವರ್ಣ ಮಾಧ್ಯಮ' ಮಾರ್ಗವನ್ನನುಸರಿಸಿ, 'ಲೋಕಸಂಸಾರಿತ್ವ' ಹಾಗೂ 'ಅಂತರ್ಮುಖಿತ್ವ' ತಂದೊಡ್ಡುವ ಮಾಯಾ ಬಲೆಗಳನ್ನು ಹರಿದೊಗೆಯಬೇಕೆಂಬುದೇ ಪ್ರಭುರಾಯನ ಆಕಾಂಕ್ಷೆಯಾಗಿತ್ತು. ಇಬ್ಬರ ಎದುರಿನಲ್ಲಿಯೂ ಪ್ರಭು ಉದಾತ್ತ ಆದರ್ಶವನ್ನು ಪ್ರತಿಷ್ಠಾಪಿಸುತ್ತಾನೆ.

> **"ಕಾಲೇ ಕಂಬಗಳೆನ್ನ ದೇಹವೇ ದೇಗುಲವಾಯಿತ್ತಯ್ಯಾ.**
> **ಎನ್ನ ನಾಲಿಗೆಯೆ ಗಂಟೆ, ಶಿರ ಸುವರ್ಣದ ಕಳಸ ಇದೇನಯ್ಯಾ**
> **ಸರವೆ ಲಿಂಗಕ್ಕೆ ಸಿಂಹಾಸನವಾಗಿ ಇರ್ದುದು.**
> **ಗುಹೇಶ್ವರಾ, ನಿಮ್ಮ ಪ್ರಾಣಲಿಂಗ ಪ್ರತಿಷ್ಠೆ ಪಲ್ಲಟವಾಗಿರ್ದೆನಯ್ಯಾ."**

ಇಷ್ಟಲಿಂಗ ಪೂಜೆಗೆ ಅತ್ಯಂತ ಮಹತ್ವ ಕೊಡುತ್ತಿದ್ದ ಬಸವಣ್ಣನವರಿಗೆ ಈ ಮೂರ್ತಿಭಂಜಕನ ಸಿಡಿಲುನುಡಿ ಆಶ್ಚರ್ಯವನ್ನುಂಟುಮಾಡಿರಬೇಕು. ಸತ್ಯಾವೇಶದಿಂದ ಅಲ್ಲಮ ಹೇಳುತ್ತಾನೆ:

---

‡ ಈ ಸನ್ನಿವೇಶವನ್ನು 'ಜಗಜ್ಜ್ಯೋತಿ ಬಸವೇಶ್ವರ' ನಾಟಕದಲ್ಲಿ (ಪುಟ ೯೮) ವಿವರಿಸಿದ್ದೇನೆ.

"ಎನಗೊಂದು ಲಿಂಗ, ನಿನಗೊಂದು ಲಿಂಗ, ಮನೆಗೊಂದು
ಲಿಂಗವಾಯಿತ್ತು.
ಹೋಯಿತ್ತಲ್ಲಾ ಭಕ್ತಿ ಜಲವ ಕೂಡಿ.
ಉಳಿ ಮುಟ್ಟಿದ ಲಿಂಗವ ಮನ ಮುಟ್ಟಬಲ್ಲದೇ ಗುಹೇಶ್ವರ."

"ಸೃಷ್ಟಿಗೆ ಹುಟ್ಟಿದ ಶಿಲೆ
ಕಲ್ಲುಕುಟಿಕಂಗೆ ಹುಟ್ಟಿದ ಮೂರುತಿ
ಮಂತ್ರಕ್ಕೆ ಲಿಂಗವಾಯಿತಲ್ಲಾ.
ಈ ಮೂವರಿಗೆ ಹುಟ್ಟಿದ ಮಗನ ಲಿಂಗವೆಂದು
ಕೈಯ್ಯಿಡಿವ ಅಚ್ಚವ್ರತಗೇಡಿಗಳನೇನೆಂಬೆ ಗುಹೇಶ್ವರ."

ಅಲ್ಲಮ ಬೆಲೆಕೊಡುವುದು ಕಲ್ಲುದೇವಾಲಯಗಳಿಂದ ಉಗಮಿಸುವ ಭಕ್ತಿಗಲ್ಲ; ಮನಮಂದಿರದಿಂದ ಮಿಡಿಯುವ ಭಕ್ತಿಗೆ

"ದೇಹದೊಳಗೆ ದೇವಾಲಯವಿರ್ದು, ಮತ್ತೆ
ಬೇರೆ ದೇವಾಲಯವೇಕೆ?
ಎರಡಕ್ಕೆ ಹೇಳಲಿಲ್ಲಯ್ಯಾ
ಗುಹೇಶ್ವರ, ನೀನು ಕಲ್ಲಾದರೆ ನಾನೇನಪ್ಪೆನು?"

ಮನುಷ್ಯನ ಇರುವಿಕೆಗೆ ಅವನ ವಿಚಾರವೇ ಕಾರಣವೆಂದು ಆಧುನಿಕ ಮನಃಶಾಸ್ತ್ರಜ್ಞರ ಮತ. ಅಲ್ಲಮಪ್ರಭುವೂ ಈ ಮತವನ್ನೇ ಮಂಡಿಸುತ್ತಾನೆ. ಲಿಂಗವನ್ನಾಗಲಿ, ಇತರ ಲಾಂಛನಗಳನ್ನಾಗಲಿ, ಕುರಿತು ಭಕ್ತ ಧ್ಯಾನಿಸಿದರೆ ಅವನು ಅವುಗಳ ಪ್ರತಿರೂಪಾಗುತ್ತಾನೆ. '[illegible] ಅಪ್ರಮಾಣ, ಅಗೋಚರ' ನಾಗಿರುವವನನ್ನು ಹಾಗೆಯೇ ಸಾಕ್ಷಾತ್ಕಾರಮಾಡಿಕೊಳ್ಳಬೇಕು. ಪರಿಮಿತಿಯಿಲ್ಲದವನನ್ನು ಪರಿಮಿತಿಯೊಳಗೆ ಅಡಕಮಾಡಿದರೆ ಭಕ್ತನ ಉತ್ಕ್ರಾಂತಿಗೆ ಬಲವಾದ ಪೆಟ್ಟುಬೀಳುತ್ತದೆ.

"ಕಾಯದಲ್ಲಾದ ಮೂರ್ತಿಯಲ್ಲ.
ಜೀವದಲ್ಲಾದ ಮೂರ್ತಿಯಲ್ಲ.
ಪ್ರಾಣದಲ್ಲಾದ ಮೂರ್ತಿಯಲ್ಲ.

ಪುಣ್ಯದಲ್ಲಾದ ಮೂರ್ತಿಯಲ್ಲ.
ಮೂರ್ತಿಯಲ್ಲಾದ ಮೂರ್ತಿಯಲ್ಲ.
ಯುಗದಲ್ಲಾದ ಮೂರ್ತಿಯಲ್ಲ. ಜಗದಲ್ಲಾದ ಮೂರ್ತಿಯಲ್ಲ.
ಶಿವನಲ್ಲಾದ ಮೂರ್ತಿಯಲ್ಲ. ಶಕ್ತಿಯಲ್ಲಾದ ಮೂರ್ತಿಯಲ್ಲ.
ಇಂದೆಂಥಮೂರ್ತಿ ಎಂದು ಉಪಮಿಸುವೆ?
ಕಾಣಬಾರದಕಾಯ ನೋಡಬಾರದ ತೇಜ ಉಪಮಿಸಬಾರದ ನಿಲವು.
ಕಾರಣವಿಡಿದು ಕಣ್ಗೆ ಅಗೋಚರನಾದ ಮನವನೇನೆಂದು
ಹೇಳುವೆ ಗುಹೇಶ್ವರ.''

ಕಣ್ಗೆ ಅಗೋಚರವಾಗಿ ಅನುಭಾವವೇದ್ಯವಾದ ಅರಿವಿನ ಕಡೆಗೆ ಪ್ರಭು, ಬಸವೇಶ್ವರ, ಸಿದ್ಧರಾಮಾದಿ ಶರಣರ ಲಕ್ಷ್ಯವೆಳೆದ.

ಬಸವಣ್ಣನವರ ಮಾತಿಗೆ ಗೌರವಕೊಟ್ಟು ಪ್ರಭು ಕಲ್ಯಾಣಕ್ಕೆ ಹಿಂದಿರುಗುತ್ತಾನೆ. ಆದರೆ ಪ್ರಭುವಿನ ಪರೀಕ್ಷೆ ಮುಗಿದಿಲ್ಲ. ಲಕ್ಷ ಅರವತ್ತು ಸಾವಿರ ಜಂಗಮಕ್ಕೆ ನಿತ್ಯದಾಸೋಹ ಮಾಡಿಸುತ್ತಿದ್ದ ಬಸವಣ್ಣನವರಲ್ಲಿ ಅಹಂಕಾರ ಮನೆಮಾಡಿದೆ. ಅಲ್ಲಮ ಹಸಿವಿನ ಸೋಗುಹಾಕಿ ಓಗರವನಿಕ್ಕಿಸೆಂದು ಬಸವಣ್ಣನವರನ್ನು ಬೇಡುತ್ತಾನೆ. ಬಸವಣ್ಣನವರಿಗೆ ಸಮಸ್ಯೆಯಾಗುತ್ತದೆ. ದಾಸೋಹಕ್ಕೆ ನೆರೆದಿದ್ದ ಜಂಗಮವೃಂದ ಊಟದ ದಾರಿನೋಡುತ್ತ ಕುಳಿತಿದೆ; ಇಲ್ಲಿ ಪ್ರಭು ಹಸಿವೆಂದು ಹುಯ್ಯಲಿಡುತ್ತಿದ್ದಾನೆ. ಬಸವಣ್ಣನವರು ಎಲೆ ಹಾಕಿಸಿ ಪ್ರಭುವಿಗೆ ಅನ್ನಾದಿ ಭೋಜನ ಸಾಮಗ್ರಿಗಳನ್ನು ನೀಡಲಾರಂಭಿಸುತ್ತಾರೆ. ಲಕ್ಷ ಅರವತ್ತು ಸಾವಿರ ಜಂಗಮಕ್ಕೆ ಮಾಡಿದ್ದ ಅಡಿಗೆಯನ್ನು ಪ್ರಭು ತಿಂದು ಮುಗಿಸುತ್ತಾನೆ. ಆದರೂ ಅವನ ಹಸಿವು ಅಡಗುವುದಿಲ್ಲ. ಪ್ರಭು ಪರೀಕ್ಷೆಯ ಅಂತರಾರ್ಥವನ್ನು ತಿಳಿದ ಬಸವಣ್ಣನವರು ಶರಣಾಗತರಾಗಿ ಕ್ಷಮೆಬೇಡುತ್ತಾರೆ. 'ಜಂಗಮದಾಸೋಹ ಮಾಡಿಸುತ್ತೇನೆಂಬ ಹಮ್ಮುಬಿಮ್ಮು ನಿನಗೆ ಸಲ್ಲದು ಬಸವಣ್ಣ. ನೀಡುವವನು ಯಾರು – ಬೇಡುವವನು ಯಾರು? ಕೊಡುವವನು ಕೊಳ್ಳುವವನು ಅವನೇ ಆಗಿರುವಾಗ ನಾನು ಮಾಡಿದೆ, ನಾನುನೀಡಿದೆ ಎಂಬಹಂಕಾರ ತಳೆಯುವುದು ವಿವೇಕವೇ?' ಎಂದು ಬುದ್ಧಿ ಹೇಳುತ್ತಾನೆ. ಬಸವಣ್ಣನವರು ಹೊರಗೆ ಬಂದು ನೋಡಿದಾಗ ಜಂಗಮ

ವೃಂದ ಉಂಡು ಸುಖವಾಗಿ ಮಲಗಿರುವುದನ್ನು ಕಂಡು ಆಶ್ಚರ್ಯಚಕಿತರಾಗಿ 'ಬಸುರಿ ಹೆಂಗಸಿನೂಟ ಹೊಟ್ಟೆಯ ಶಿಶುವ ದಣಿಸುವವೊಲು, ಜಗಂಗಳ ಬಸುರೊಳಡಗಿಸಿಕೊಂಡು ನೀ ದಣಿಯುಣಲು ಜಂಗಮಕೆ ಹಸಿವದೆಲ್ಲಿಯದು ? ಎಲ್ಲರಿಗೆ ಸಂತಸವು, ಸಂತುಷ್ಟತೆಯುಲಿದ್ದರು, ಹೊಸತಿದಾದುದು ಲೋಕದೊಳು ಗುರುರಾಯ ' ಎಂದು ಹೇಳುತ್ತಾನೆ. ತಮ್ಮ ಮಹಾಗುರುವಿನ 'ಹಿರಣ್ಯಗರ್ಭ' ಸ್ವರೂಪದರಿವು ಬಸವಣ್ಣನವರಿಗಾಗುತ್ತದೆ. ಪ್ರಭುವನ್ನು ಕಾಡಿ, ಬೇಡಿ ಅವನನ್ನು ಅನುಭವ ಮಂಟಪದ 'ಶೂನ್ಯಸಿಂಹಾಸನದ ಪೀಠ'ದ ಮೇಲೆ ಬಸವಣ್ಣನವರೂ, ಇತರ ಶರಣರೂ ಕೂಡಿಸುತ್ತಾರೆ.

ತನ್ನ ಸೋದರ ಅಜಗಣ್ಣನ ಸಾವಿನಿಂದ ದುಃಖಪೀಡಿತಳಾಗಿದ್ದ ಮುಕ್ತಾಯಕ್ಕನಿಗೆ ಸಾವು ಜೀವಗಳ ರಹಸ್ಯವನ್ನು ವಿವರಿಸಿ ಹೇಳಿ ಅವಳನ್ನು ಪ್ರಭು ಸಂತೈಸುತ್ತಾನೆ. ಸಾವು, ಜೀವದ ಒಂದು ಅವತಾರ. ದೇವರತ್ತ ಮನತಿರುಗಿಸಿದವನು ಸಾವಿಗಂಜದ ಮಹಂತನಾಗುತ್ತಾನೆ. ಭಕ್ತನಿಗೆ ಸಾವು ಜಾಗೃತಿಯ ಚಿನ್ಹೆ ಎಂದು ವಿವರಿಸುತ್ತಾನೆ. ಪ್ರಭುವಿನ ಅಮೃತವಾಣಿ ಮುಕ್ತಾಯಕ್ಕನಿಗೆ ಶಾಂತಿ, ಸಮಾಧಾನಗಳನ್ನು ತಂದುಕೊಡುತ್ತದೆ. ಅವಳೂ ಪ್ರಭುರಾಯನನ್ನೇ ಗುರುವೆಂದು ನಂಬುತ್ತಾಳೆ.

ಚಾಮರಸನ ನಿರೂಪಣೆಯಂತೆ ಅಲ್ಲಮಪ್ರಭು 'ಅನುಭವಮಂಟಪ'ದಲ್ಲಿ ೧೦-೧೨ ವರ್ಷಗಳು ನಿಂತಂತೆ ತಿಳಿದು ಬರುತ್ತದೆ. ಈ ಬಗ್ಗೆ ನಿಷ್ಕೃಷ್ಟವಾದ ಸಂಗತಿಗಳು ತಳಿದುಬರುವುದಿಲ್ಲ. ಪ್ರಭು, ಪ್ರಾಯಶಃ ಎರಡು ಮೂರು ವರ್ಷಗಳಿಗಿಂತ ಹೆಚ್ಚಾಗಿ ಅನುಭವ ಮಂಟಪದಲ್ಲಿ ನಿಲ್ಲಲಿಲ್ಲ. ಅನುಭವ ಮಂಟಪದ ನಡಾವಳಿ, ಅದರಲ್ಲಿ ಪ್ರಭುವಿನ ಪಾತ್ರವನ್ನು ಗೂಳೂರು ಸಿದ್ಧ ವೀರಣಾರ್ಯ ಬಹಳ ಜಾಣತನದಿಂದ ತನ್ನ 'ಶೂನ್ಯ ಸಂಪಾದನೆ' ಗ್ರಂಥದಲ್ಲಿ ನೆಯ್ದಿದ್ದಾನೆ. ಧಾರ್ಮಿಕ, ನೈತಿಕ ವಿಷಯಗಳ ಬಗ್ಗೆ ಪ್ರಭು ತಳೆದಿದ್ದ ನಿಷ್ಕೃಷ್ಟ ಧೋರಣೆ ಅದರಿಂದ ವ್ಯಕ್ತವಾಗುತ್ತದೆ. ಪ್ರಭುವಿನ ಹೈತುಕವಾದ ಅನುಭವಮಂಟಪದ ಸಣ್ಣಪುಟ್ಟ ದೇವರುಗಳಿಗೆ ಅಸಮಾಧಾನವನ್ನುಂಟು ಮಾಡಿರಬೇಕು. ಮತಗಳ ಮಿತಿಯನ್ನು ದಾಟಿದ ಅವನ ದರ್ಶನ ಅವರಿಗೆ ಪ್ರಿಯವಾಗಿತ್ತೆಂದು ಹೇಳಲು ಸಾಧ್ಯವಿಲ್ಲ. ವೀರಶೈವ ಧರ್ಮಕ್ಕೆ ವಿಶ್ವಧರ್ಮದ

ವ್ಯಾಪ್ತಿಯನ್ನಿತ್ತು ತಮ್ಮ ನವೋದಯ ಚಳುವಳಿಯನ್ನು ಪ್ರಭುದೇವರು ದುರ್ಬಲಮಾಡುತ್ತಿದ್ದಾನೆಂದು ಅವರು ಭಾವಿಸಿದರು. ಈ ಅಗ್ನಿಭಕ್ಷಕರೇ ಬಿಜ್ಜಳನ ವಧೆಗೂ, ಬಸವಣ್ಣನವರು ಕಲ್ಯಾಣಬಿಟ್ಟುಹೋಗುವುದಕ್ಕೂ ಕಾರಣರಾದರು. ಪ್ರಭು ನೊಂದು, ಬೇಸತ್ತು ಕಲ್ಯಾಣಬಿಟ್ಟುಹೋಗಿರಬೇಕು.

ಅನುಭವಮಂಟಪದ ಅಧ್ಯಕ್ಷನಾಗಿ ಪ್ರಭು ಆಡಿರುವ ಮಾತುಗಳು, ವಾದವಿವಾದಗಳಲ್ಲಿ ಕೊಟ್ಟಿರುವ ನಿರ್ಣಯ ಆತನ ದೈವಿಕ ಪ್ರತಿಭೆಯ ದ್ಯೋತಕವಾಗಿದೆ. ಶಾಸ್ತ್ರದರ್ಶನಗಳಲ್ಲಿ ಪಾರಂಗತನಾದ ಪ್ರಭು ಅವುಗಳ ಮೇಲೆ ಕೂಡಿದ್ದ ಕಾಲದ ಧೂಳನ್ನು ನಿವಾರಿಸಿ ಹೈತುಕವೂ, ಸಮರಸವೂ ಆದ ಸಮನ್ವಯ ಸಿದ್ಧಾಂತವೊಂದನ್ನು ಮಂಡಿಸಿದ್ದಾನೆ. ಸಿದ್ಧರಾಮನ ಕರ್ಮಮಾರ್ಗವನ್ನೊಪ್ಪಿಕೊಂಡ ಪ್ರಭುವೆ, ಮಹಾದೇವಿಯ ಜ್ಞಾನಮಾರ್ಗವನ್ನು ಒಪ್ಪಿಕೊಳ್ಳುತ್ತಾನೆ. ಅಸ್ಪೃಶ್ಯತೆಯ ಕಳಂಕವನ್ನು ತೊಡೆದು ಸಮಾಜಬಾಹಿರವಾದ ಆ ದಲಿತವರ್ಗವನ್ನು 'ವೀರಶೈವ ಧರ್ಮ'ಕ್ಕೆ ಸೇರಿಸಲು ಬಸವಣ್ಣನವರು ಪ್ರಯತ್ನಿಸಿದ್ದರೆ, ಪ್ರಭುದೇವ ಅದಕ್ಕಿಂತಲೂ ಒಂದು ಹೆಜ್ಜೆ ಮುಂದಕ್ಕೆ ಹೋದ. ಆತ್ಮನ ಏಕತ್ವವನ್ನು ಸಾರಿದ ಹಿರಿಮೆ ಪ್ರಭುದೇವನದು. ಎಲ್ಲ ಧಾರ್ಮಿಕ ನಂಬಿಕೆಗಳನ್ನು ಅವನು ಅಂಗೀಕರಿಸಿದ. ಆದರವು ಅಸಹನೆಯಿಂದ ದೂರವಿರಬೇಕೆಂಬ ಎಚ್ಚರಿಕೆಯನ್ನು ಕೊಟ್ಟ.

ಬಸವಣ್ಣನವರು ಆರಂಭಿಸಿದ ನವ–ವೀರಶೈವ ಮತದ ನಾಯಕರಲ್ಲಿ ಪ್ರಭುವೂ ಒಬ್ಬನೆಂದು ಅಂಗೀಕರಿಸಲಾಗಿದೆ. ಈ ಬಗ್ಗೆ ಕನ್ನಡ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿಲ್ಲ. ಪಂಚಾಚಾರ, ಅಷ್ಟಾವರಣಗಳು ವಿಧಿಸಿದ ಮಿತಿಯನ್ನು ಗಮನಿಸಿದರೆ ಪ್ರಭು ನಿಜವಾಗಿ ಈ ಪಂಥದ ಪ್ರತಿನಿಧಿಯೇ ಎಂಬ ಅನುಮಾನ ಬರುತ್ತದೆ. ನವ–ವೀರಶೈವದ ಅನೇಕ ಕಟ್ಟುಪಾಡುಗಳನ್ನು, ನಂಬಿಕೆಗಳನ್ನು ಅವನು ಖಂಡಿಸಿರುವುದಲ್ಲದೆ, ವೀರಶೈವರು ಅತ್ಯಂತ ಪವಿತ್ರವೆಂದೆಣಿಸುವ ಅನೇಕ ಆಚರಣೆಗಳನ್ನು ಅವನು ಪ್ರತಿಭಟಿಸಿದ್ದಾನೆ. ಅವನ ಅದ್ವಿತೀಯ ವ್ಯಕ್ತಿತ್ವ, ನಿಲುವು ಮತ್ತು ಬಸವಣ್ಣನವರಿಗೂ ಅವನಿಗೂ ಇದ್ದ ಹಾರ್ದಿಕ ಪ್ರೇಮದ ಪ್ರಭಾವದಿಂದ ಅವನು

ಅನುಭವ ಮಂಟಪ*ದಲ್ಲಿ ಉಳಿಯುವುದು ಸಾಧ್ಯವಾಯಿತು. ಅವನ ಸ್ಥಾನದಲ್ಲಿ ಬೇರೆಯವರಿದ್ದು, ಅವನ ಧೋರಣೆಯನ್ನು ತಳೆದಿದ್ದರೆ 'ಬಹಿಷ್ಕಾರ'ಕ್ಕೆ ತುತ್ತಾಗುತ್ತಿದ್ದರು.

ವಿಶ್ವಧರ್ಮದ ಇತಿಹಾಸದಲ್ಲಿ, ನವ-ವೀರಶೈವ ಮತಚರಿತ್ರೆಯಲ್ಲಿ ಪ್ರಭುದೇವನ ಸ್ಥಾನ ಅನ್ಯಾದೃಶವಾದುದು. ಅವನು ಗುರುವಿನ ಗುರುವಾಗಿ ಅಮರ ದೈವಿಕಜ್ಞಾನವನ್ನು ಜಗತ್ತಿನಲ್ಲಿ ಪಸರಿಸಬಲ್ಲ ಧರ್ಮದೂತರ ತಂಡವನ್ನು ನಿರ್ಮಿಸಲು ಪ್ರಯತ್ನಿಸಿದ. ಭಯವೆಂದರೇನೆಂಬುದೆಂದರಿಯದ ನಿರ್ಭಯ; ಜಗತ್ತಿನ ಸಣ್ಣಪುಟ್ಟ ದುಃಖಕ್ಕೂ ಮರುಗಿ ಕಣ್ಣೀರಿಡುತ್ತಿದ್ದ ಮಮತೆಯ ಮೂರ್ತಿ ಪ್ರಭುರಾಯ. ಅವನ ಹೃದಯ ವಜ್ರದಂತೆ ಕಠೋರ-ಕುಸುಮದಂತೆ ಕೋಮಲ. ಅವನ ಜೀವನ ದರ್ಶನ ಎಲ್ಲ ಮತ, ಪಂಥ, ರಾಷ್ಟ್ರದವರಿಗೂ ದಿವ್ಯ ಬೆಳಕಾಗಿದೆ. ಆ ಜ್ಞಾನಭಾಸ್ಕರನ ಪ್ರಖರ ಕಿರಣಕ್ಕೆ ಸಿಕ್ಕಿದ ಎಂಥವನ ತಮಂಥತೆಯೂ ಹರಿದೋಡಲೇ ಬೇಕು.

೨

'ಯಾವದು ಸತ್ಯವೋ ಅದನ್ನು ಖಚಿತವಾಗಿ ತಿಳಿದುಕೊಳ್ಳುವುದು, ಯಾವದು ಒಳ್ಳೆಯದೋ ಅದನ್ನೇ ಆಚರಿಸುವುದು ದರ್ಶನದ ಎರಡು ಮುಖ್ಯೋದ್ದೇಶಗಳು' ಎಂದು ಫ್ರಾನ್ಸಿನ ಮಹಾಕವಿ ವಾಲ್ಟೇರ್† ಹೇಳಿದ್ದಾನೆ. ವಿಚಾರ, ಆಚಾರಗಳ ಸಮನ್ವಯವನ್ನು ಭಾರತೀಯ ದಾರ್ಶನಿಕರು ಒತ್ತಿಯೊತ್ತಿ ಹೇಳುತ್ತ ಬಂದಿದ್ದಾರೆ. ಐರೋಪ್ಯ ದೇಶಗಳಲ್ಲಿ ದಾರ್ಶನಿಕ

---

* ಅನುಭವ ಮಂಟಪದ ಬಗ್ಗೆ ಹೆಚ್ಚು ತಿಳಿಯಲಪೇಕ್ಷಿಸುವವರು ನನ್ನ 'ವೀರಶೈವ ಸಾಹಿತ್ಯ ಸಂಸ್ಕೃತಿ' ಗ್ರಂಥದಲ್ಲಿರುವ 'ಅನುಭವ ಮಂಟಪ' (ಪುಟ ೧೦೦) ಅಧ್ಯಾಯವನ್ನು ನೋಡಬಹುದು.

†"The two most important objects of philosophy are the discovery of what is true and the practice of that which is good"

—Voltaire.

ದಾಂಪತ್ಯವಿಚ್ಛೇದನ ಕೋರ್ಟುಗಳನ್ನು ಪದೇಪದೇ ಹೊಕ್ಕುಬರುವುದು ಅಸಾಮಾನ್ಯವೇನಲ್ಲ. ಎಲ್ಲ ದರ್ಶನಗಳ ತೂಗುತೊಟ್ಟಿಲಾದ ಭಾರತದಲ್ಲಿ ಈ ಆಚರಣೆ ಸಾಧ್ಯವೇ ಇಲ್ಲ.

ಅಲ್ಲಮಪ್ರಭು ಹೊಸದರ್ಶನವನ್ನಾಗಲಿ, ಮತವನ್ನಾಗಲಿ ಸ್ಥಾಪಿಸಲಿಲ್ಲ. ಧಾರ್ಮಿಕ ವಿಷಯಗಳಲ್ಲಿ ಜನತೆಯಲ್ಲಿದ್ದ ಅಸೀಮ ಅಜ್ಞಾನವನ್ನು ನಿವಾರಿಸಿ ಸತ್ಯಸಾಧನೆಯ ಹಂಬಲು ಅವರಲ್ಲಿ ಹುಟ್ಟಲು ಅವನು ಶ್ರಮಿಸಿದ. ಜೀವನದ ನಿತ್ಯತತ್ವಗಳನ್ನು ಜನತೆಯ ಮುಂದಿಟ್ಟು ಅವುಗಳ ಅನುಷ್ಠಾನದ ಕಡೆಗೆ ಅವರ ಗಮನಸೆಳೆದ. ಪರಿಣಾಮದ ಕಡೆಗೆ ಲಕ್ಷ್ಯವಿಡದೆ ಮಾನವ, ಸಾಧಾರಣವಾಗಿ, ಪ್ರಚಲಿತ ತತ್ತ್ವಗಳ ಪ್ರವಾಹದ ಜತೆ ಸಾಗುತ್ತಾನೆ. ಅತೃಪ್ತಿ, ನಿರ್ವಿಣ್ಣತೆ ಅವನನ್ನು ವಿವೇಕಶೂನ್ಯನನ್ನಾಗಿ ಮಾಡಿ, ಅವನ ವಿಚಾರಶಕ್ತಿಯನ್ನು ಕುಂಠಿತಗೊಳಿಸುತ್ತವೆ. ಜೀವಂತ ಸಮಸ್ಯೆಗಳ ಪರಿಹಾರಕ್ಕೆ ಬುದ್ಧಿಪೂರ್ವಕವಾಗಿ ಪ್ರಯತ್ನಿಸುವುದನ್ನು ಕಲಿಸುವುದರ ಬದಲು ಮತ ಮೂಢನಂಬಿಕೆಯನ್ನೂ ಅನಾದ್ಯ ಆಚಾರಗಳನ್ನೂ ಕಲಿಸುತ್ತದೆ. ಮತ ನಂಬಿಕೆ ಮಾನವನಲ್ಲಿ ಆತ್ಮನಂಬಿಕೆ ಹುಟ್ಟಿಸುವುದರ ಬದಲು ಅವನನ್ನು ಅಗೋಚರ ಶಕ್ತಿಗಳಲ್ಲಿ ನಂಬಿಕೆಯಿಡುವ ದುರ್ಬಲನನ್ನಾಗಿ ಮಾಡುತ್ತದೆ.

ತಾತ್ಕಾಲಿಕ ಹಾಗೂ ಶಾಶ್ವತ ಸಮಸ್ಯೆಗಳನ್ನು ಅಲ್ಲಮ ಅನನ್ಯ ಸ್ಥೈರ್ಯ, ವಿವೇಕಗಳಿಂದ ಎದುರಿಸುತ್ತಾನೆ. ಅವನ ಪ್ರತಿಭೆ ತಿಳಿವಿನ ಹೊಸ ಹಾದಿಗಳನ್ನು ನಿರ್ದೇಶಮಾಡಿ ಸಮಸ್ಯೆಗಳ ಪರಿಹಾರಕ್ಕೆ ಸಹಾಯಕವಾಗುವ ಕ್ರಮಗಳನ್ನು ಆವಿಷ್ಕಾರಮಾಡಿದೆ.

ಬೇಕನ್† ಹೇಳಿದಂತೆ ತಾತ್ತ್ವಿಕ ವಿವೇಚನೆ ಮಾನವನ ಮನಸ್ಸನ್ನು ನಾಸ್ತಿಕತೆಯ ಕಡೆಗೊಯ್ಯುತ್ತದೆ. ಆದರೆ ತಾತ್ತ್ವಿಕ ವಿವೇಚನೆ ಆಳವಾಗಿದ್ದರೆ ಅದು ಅವನನ್ನು ಮತದ ಬಳಿಗೆ ಕರೆತರುತ್ತದೆ. ಜಿಜ್ಞಾಸು ನಾಲ್ಕು ಮುಖ್ಯ ಪ್ರಶ್ನೆಗಳಿಗೆ ಉತ್ತರ ದೊರಕಿಸಲು ಹೊರಡುತ್ತಾನೆ: **ಎಲ್ಲಿಗೆ? ಎಲ್ಲಿಂದ?**

---

†"Philosophical thought inclineth man's mind to atheism but depth in philosophy bringeth men's minds about to religion."

—BACON

ಹೇಗೆ? ಏಕೆ? ಆದರವನು ತನ್ನ ಪ್ರಯತ್ನದ ಫಲವನ್ನು ನಮಗೆ ಕೊಡುವುದರ ಬದಲು ನಮ್ಮನ್ನು ಒಣತರ್ಕದ ಗೊಂಡಾರಣ್ಯಕ್ಕೆ ಕರೆದೊಯ್ದು ಕೈಬಿಡುತ್ತಾನೆ. ಅಲ್ಲಿ ನಾವು ದಿಕ್ಕೆಟ್ಟು ಮತಿಭ್ರಾಂತರಾಗುತ್ತೇವೆ. ಯಾವ ಜಿಜ್ಞಾಸುವೂ, ಮಾನವಕಲ್ಯಾಣಕ್ಕೆ ಸಂಬಂಧಪಟ್ಟ ಈ ಪ್ರಧಾನ ಪ್ರಶ್ನೆಗಳಿಗೆ 'ಇದಮಿತ್ಥಂ' ಎಂದು ಉತ್ತರ ಹೇಳಿಲ್ಲ. ಹಾಗಾದರೆ ತಾತ್ತ್ವಿಕ ವಿವೇಚನೆ ನಿರರ್ಥಕವಲ್ಲವೇ? ಅನೇಕಾನೇಕ ವರ್ಷಗಳ ಸಾಧನೆಮಾಡಿಯೂ ಜಿಜ್ಞಾಸು ಇವುಗಳ ಬಗ್ಗೆ ನಿಷ್ಕೃಷ್ಟಾಭಿಪ್ರಾಯಗಳನ್ನು ತಿಳಿಸದಿದ್ದರೆ, ನಾವು ವೃಥಾ ಕಾಲಹರಣಮಾಡಿ ಏನು ಪ್ರಯೋಜನ? ಅನವಶ್ಯಕವಾಗಿ ಮರೀಚಿಕೆಯ ಬೆನ್ನು ಹತ್ತಿ ಬಳಲುವುದೇಕೆ? ಜಿಜ್ಞಾಸುಗಳು ನಮಗೆ ಉತ್ಕ್ರಾಂತಿಯ ಮಾರ್ಗವನ್ನು ಮಾತ್ರ ತೋರಬಲ್ಲರು. ಅವರು ಕೂಡ ದೈವಜ್ಞಾನವನ್ನು ಒಂದು ಗುಳಿಗೆಮಾಡಿ ನಮ್ಮ ಗಂಟಲಲ್ಲಿ ಹಾಕಲಾರರು. ಪ್ರತಿಯೊಬ್ಬ ಸಾಧಕನೂ ಈ ಮಹಾಸಾಗರದ ಮೇಲೆ ತನ್ನ ಜೀವನನೌಕೆಯನ್ನು ನಡೆಸಿ ತಾನೇ ದಡ ಕಂಡುಕೊಳ್ಳಬೇಕು. ನಾವಿಕನಿಗೆ ದಿಕ್‌ಸೂಚಿ ಪ್ರಯೋಜನವಾಗುವಂತೆ ಜಿಜ್ಞಾಸು ನಮಗೆ ಪ್ರಯೋಜನಕಾರಿಯಾಗಬಲ್ಲ.

ಸಾಧಕರಿಗೆ ಯೋಗ್ಯ ಮಾರ್ಗದರ್ಶನ ಮಾಡಿಸಬಲ್ಲ ಅಲ್ಲಮ ಪ್ರಭು ಖಂಡಿತವಾದಿ. ಸಾಧಕನ ಶ್ರದ್ಧೆಯಲ್ಲಿ ಮೊದಲು ಅವನಿಗೆ ಪೂರ್ಣನಂಬಿಕೆ ಹುಟ್ಟಬೇಕು. ದೇವರ ವಿಷಯ, ದೇವತ್ವದ ವಿಷಯ ಮಾತನಾಡುವುದು ಸುಲಭ ಸಾಧ್ಯವಲ್ಲವೇ? ಆದರೆ ಈ ಮಾತು ಎಷ್ಟರವರೆಗೆ ಹೃದಯಾಂತರಾಳದಿಂದ ಬರುತ್ತದೆ?

"ದೇಶಗುರಿಯಾಗಿ ಲಯವಾಗಿ ಹೋದವರ ಕಂಡೆ.
ತಮಂಥ ಗುರಿಯಾಗಿ ಲಯವಾಗಿ ಹೋದವರ ಕಂಡೆ.
ಕಾಮಗುರಿಯಾಗಿ ಲಯವಾಗಿ ಹೋದವರ ಕಂಡೆ.
ನೀ ಗುರಿಯಾಗಿ ಲಯವಾಗಿ ಹೋದವರ ಕಾಣೆ ಗುಹೇಶ್ವರ."

ನಿತ್ಯಸಂದೇಹಿ ಈ ವಾದವನ್ನು ಪ್ರತಿಭಟಿಸಿ ಕೇಳಬಹುದು 'ಯಾವದೋ ವಸ್ತುವಿಗಾಗಿ – ದೇವರೇ ಆಗಿರಬಹುದು – ಅದರ ಅಸ್ತಿತ್ವವನ್ನೇ ಅರಿಯದೆ

ನಾನು ಹೇಗೆ ಸಾಯಲಿ?' ಆಸ್ತಿಕ ದೇವರು ಇದಾನೆ ಎಂಬ ವಿಷಯವನ್ನು ಮಹಾನುಭಾವರ ಹಾಗೂ ಉದ್ಗ್ರಂಥಗಳ ಸಾಕ್ಷ್ಯದಿಂದ ಒಪ್ಪಿಕೊಂಡಿದ್ದಾನೆ. ಆದರವರೂ ದಾರಿತಪ್ಪಿಲ್ಲವೇ? ಪ್ರಕಟವಾಗದಿರುವ ವ್ಯಕ್ತಿಯ ಇರುವನ್ನು ನಂಬುವುದಾದರೂ ಹೇಗೆ? ಇದಕ್ಕೆ ಅಲ್ಲಮ ಉತ್ತರ ಸಿದ್ಧಗೊಳಿಸಿದ್ದಾನೆ;

"ಕಲ್ಲೊಳಗಣ ಕಿಚ್ಚು ಉರಿಯಬಲ್ಲುದೆ?
ಬೀಜದೊಳಗಣ ವೃಕ್ಷ ಉಲಿಯಬಲ್ಲುದೆ?
ತೋರಲಿಲ್ಲಾಗಿ ಬೀರಲಿಲ್ಲಾರಿಗೆಯು
ಗುಹೇಶ್ವರ, ನಿಮ್ಮ ನಿಲುವ ಅನುಭಾವಸುಖಿಬಲ್ಲ."

"ಜಲದೊಳಗಿರ್ದ ಕಿಚ್ಚು ಜಲವ ಸುಡದೆ,
ಜಲವು ತಾನಾಗಿಯೆ ಇದ್ದಿತ್ತು ನೋಡಾ,
ನೆಲೆಯನರಿದು ನೋಡಿಹೆನೆಂದಡೆ,
ಅದು ಜಲವು ತಾನಲ್ಲ
ಕುಲದೊಳಗಿರ್ದು ಕುಲವ ಬೆರಿಸದೆ ನೆಲೆಗಟ್ಟು
ನಿಂದುದನಾರು ಬಲ್ಲರು?
ಹೊರಗೊಳಗೆ ತಾನಾಗಿರ್ದು ಮತ್ತೆ ತಲೆದೋರದಿಪ್ಪುದು-
ಗುಹೇಶ್ವರ, ನಿಮ್ಮ ನಿಲುವು ನೋಡಾ."

"ನೆಲದ ಮರೆಯ ನಿಧಾನದಂತೆ
ಮುಗಿಲ ಮರೆಯುಲಡಗಿರ್ದ ಮಿಂಚಿನಂತೆ
ಕಂಗಳ ಮರೆಯುಲಡಗಿರ್ದ ಬೆಳಗಿನಂತೆ
ಗುಹೇಶ್ವರ, ನಿಮ್ಮ ನಿಲುವು"

ಜ್ಞಾನಕ್ಕತೀತವಾದ ಜ್ಞಾನವಿದೆ, ಬುದ್ಧಿಗತೀತವಾದ ಬುದ್ಧಿಯಿದೆ, ಧಾರಣಕ್ಕತೀತವಾದ ಧಾರಣವಿದೆ. ಪಾರ್ಥಿವಶರೀರಿಯಾದ ಮಾನವ ಅಪಾರ್ಥಿವವಾದ, ಅನಂತವಾದ ಜ್ಞಾನ ಬುದ್ಧಿಯ ಉಗಮಸ್ಥಾನವನ್ನು ಅರಿಯುವುದೆಂತು? ಸಾಧಕ ತನ್ನ ಉತ್ಕ್ರಾಂತಿಯಲ್ಲಿ ಒಂದು ಸ್ಥಿತಿ ಮುಟ್ಟುತ್ತಾನೆ. ಆಗ ಅವನು ತನ್ನ ಕುಬ್ಜಾತ್ಮವನ್ನು ಬೃಹದಾತ್ಮವನ್ನಾಗಿ ಮಾರ್ಪಡಿಸುತ್ತಾನೆ. ಅವನೇ ಅನಂತನಾಗಿ ಅನಂತತೆಯಲ್ಲಿ ತಲ್ಲೀನ

ನಾಗುತ್ತಾನೆ. ತಾನು ಅರಸುತ್ತಿರುವ ಘನವಸ್ತುವನ್ನು ತನ್ನೊಳಗೇ ಕಂಡು ಕೊಳ್ಳುತ್ತಾನೆ.

"ಎನ್ನ ಮನದ ಕೊನೆಯ ಮೊನೆಯ ಮೇಲೆ,
ಅಂಗವಿಲ್ಲದ ರೂಪನ ಕಂಡು, ಮರುಳಾದೆನವ್ವಾ.
ಆತನ ಕಂಡು ಬೆರಗಾದೆನವ್ವಾ.
ಎನ್ನಂತರಂಗದ ಆತ್ಮನೊಳಗೆ ಅನುಮಿಷ
ನಿಜೈಕ್ಯ ಗುಹೇಶ್ವರನ ಕಂಡು."

ಯಾವ ಪರಮೇಷ್ಠಿಯನ್ನು ಸಾಧಕ ಅರಸುತ್ತಿದ್ದಾನೆಯೋ ಅವನು ಸಾಧಕನ ಮನೋಮಂದಿರದಲ್ಲಿಯೇ ಪ್ರತಿಷ್ಠಿತನಾಗಿದ್ದಾನೆಂಬ ಪರಿಜ್ಞಾನ ಹುಟ್ಟಿದಾಗ ಸಾಧಕನಲ್ಲಿ ಹೆಚ್ಚಿನ ಜ್ಞಾನೋದಯವಾಗುತ್ತದೆ. ಸಮಸ್ತ ಚರಾಚರ ಸೃಷ್ಟಿಯೂ ಅವನ ಅನಂತ ಸೌಂದರ್ಯದಾವಿರ್ಭಾವವೆಂದೂ, ಸಮಸ್ತ ಚೇತನವೂ ಅವನ ಅಪರಿಮಿತಶಕ್ತಿಯ ಪ್ರತೀಕವೆಂದೂ ಸಾಧಕನಿಗೆ ಭಾಸವಾಗುತ್ತದೆ.

"ಇಹಲೋಕ ಪರಲೋಕ ತಾನಿದ್ದಲ್ಲಿ
ಗಗನ ಮೇರುಮಂಡಲ ತಾನಿದ್ದಲ್ಲಿ
ಸಕಲ ಭುವನ ತಾನಿದ್ದಲ್ಲಿ
ಸತ್ಯ ನಿತ್ಯ ನಿರಂಜನ ಶಿವತತ್ತ್ವ ತಾನಿದ್ದಲ್ಲಿ
ಉತ್ತರೋತ್ತರ ಛತ್ರವಳಿಯ ತಾನಿದ್ದಲ್ಲಿ
ಚಂದ್ರಸೂರ್ಯ ತಾರಾಮಂಡಲ ತಾನಿದ್ದಲ್ಲಿ
ಅಂತರ ಮಹದಂತರ ತಾನಿದ್ದಲ್ಲಿ
ಸ್ವತಂತ್ರ ಗುಹೇಶ್ವರ ತಾನಿದ್ದಲ್ಲಿ."

ಮನುಷ್ಯನಿಗೂ ದೇವರಿಗೂ (ಜೀವಾತ್ಮ, ಪರಮಾತ್ಮ) ಇರುವ ಸಂಬಂಧವನ್ನು ಅಲ್ಲಮ ಪೃಥಃಕರಿಸುತ್ತಾನೆ. ಮಿತ, ಅಮಿತವಾಗುವ ಬಗೆಯನ್ನರಿಯುವುದು ಸುಲಭ ಸಾಧ್ಯವಲ್ಲ.

"ಎತ್ತಣ ಮಾಮರ. ಎತ್ತಣ ಕೋಗಿಲೆ?
ಎತ್ತಣಿಂದೆತ್ತ ಸಂಬಂಧವಯ್ಯಾ?

ಬೆಟ್ಟದ ನೆಲ್ಲಿಯಕಾಯಿ, ಸಮುದ್ರದೊಳಗಣ ಉಪ್ಪು
ಎತ್ತಣಿಂದೆತ್ತ ಸಂಬಂಧವಯ್ಯಾ ?
ಗುಹೇಶ್ವರ ಲಿಂಗಕ್ಕೆಯು ಎನಗೆಯು
ಎತ್ತಣಿಂದೆತ್ತ ಸಂಬಂಧವಯ್ಯಾ ''

ಪರಮಾತ್ಮನಲ್ಲಿ ಮಾನವ 'ತನ್ನತನ'ವನ್ನು ಕಳೆದುಕೊಳ್ಳಬೇಕೆಂದು ಅಲ್ಲಮನ ಅಪೇಕ್ಷೆ.

''ಎನ್ನಲ್ಲಿ ನೀನು ನಿಜವಾಗಿ ನಿಂದು ಅರಿದಿಹೆನೆಂದರೆ
ಅದು ನಿಮ್ಮ ಮತಕ್ಕೆ ಬಪ್ಪುದೆ ?
ಎನ್ನ ನಾನು ಮರೆದು ನಿಮ್ಮನರಿಡಡೆ ಅದು ನಿಮ್ಮ ದೋಷವೆಂಬೆ.
ಎನ್ನ ನಾ ನಿನ್ನೊಳು ಮರೆದರೆ ಕನ್ನಡಿಯೊಳಗಣ
ಪ್ರತಿಬಿಂಬದಂತೆ ಭಿನ್ನವಿಲ್ಲದೆ ಇದ್ದೆನು ಕಾಣಾ ಗುಹೇಶ್ವರ.''

ಆತ್ಮೋತ್ಕ್ರಾಂತಿಯ ಪ್ರಯತ್ನ ಅಸ್ವಾಭಾವಿಕವಾಗಿ, ಅಕೃತ್ರಿಮವಾಗಿ, ನೈಸರ್ಗಿಕವಾಗಿರಬೇಕೆಂಬುದೇ ಅಲ್ಲಮನ ಸಿದ್ಧಾಂತ. ಸಾಧನೆಯ ಮೊದಲ ಘಟ್ಟಗಳಲ್ಲಿ ಸಾಧಕನಿಗೆ ಅವುಗಳ ಅರಿವು ಇರುತ್ತದೆ. ಸಾಧನ ಮಾರ್ಗದಲ್ಲಿ ಅವನು ಮುಂದಡಿಯಿಟ್ಟಂತೆ ಆ ಅರಿವನ್ನೂ ನೀಗಿಕೊಂಡು, ಆದರ್ಶದೊಂದಿಗೆ ಒಂದಾಗುತ್ತಾನೆ. ಸೋಪಜ್ಞತೆಯಿಲ್ಲದೆಯೇ ಅವನು ಪ್ರಗತಿಗಾಮಿಯಾಗುತ್ತಾನೆ.

''ಹರಿದರಸಿಹೆನೆಂದರೆ ಮನದ ವಿಕಾರ.
ಸುಳಿದರಸಿಹೆನೆಂದರೆ ಪವನ ವಿಕಾರ.
ನಿಂದರಸಿಹೆನೆಂದರೆ ಕಾಯ ವಿಕಾರ.
ಒಳಗರಸಿಹೆನೆಂದರೆ ಜ್ಞಾನವಿಕಾರ.
ಅರಸನಿಲ್ಲದೆ ಬೆರಸಬಲ್ಲರ ಆತನೆ ಶರಣ ಗುಹೇಶ್ವರ.''

ದ್ವೈತಭಾವದಲ್ಲಿಯೇ ಅಲ್ಲಮ ತೃಪ್ತಿಪಟ್ಟುಕೊಂಡಿಲ್ಲ. ಸಾಧಕ ಆಲಸಿಯಾಗಿ ಕುಳಿತು ಅಮಾನುಷಶಕ್ತಿಗಳ ಸಹಾಯಕ್ಕಾಗಿ ಗೋಗರೆಯುವುದು ಸಲ್ಲದು. ಜೀವನದ ಅಶಾಶ್ವತೆ, ಹುಟ್ಟು ಸಾವುಗಳ ಅನಂತ ಚಕ್ರವ್ಯೂಹ

ಆಸೆ ಆಮಿಷಗಳ ಸೆಳೆತವನ್ನು ಮಾನವ ಚೆನ್ನಾಗಿ ಅರ್ಥಮಾಡಿಕೊಳ್ಳಬೇಕು. ಸ್ಥೂಲ ಚಕ್ಷುಸ್ಸುಗಳಿಂದ ಅವನು ಕಂಡಿರುವ ಸ್ವಾರ್ಥಜೀವನಕ್ಕಿಂತಲೂ ಹಿರಿದಾದುದು, ಪವಿತ್ರವಾದುದು ಒಂದಿದೆ – ಅದು ಆಸೆ ಆಮಿಷಗಳನ್ನು ಗೆದ್ದು ನಿಂತಿದೆ ಎಂಬರಿವು ಬಂದರೇ ಅವನು ತನ್ನ ಲಾಲಸೆಗಳನ್ನು ಗೆಲ್ಲಬಲ್ಲ. ಜೀವನದ ಹಿರಿಯಾದರ್ಶವನ್ನು ಗ್ರಹಿಸಿದಾಗಲೇ ಹುಟ್ಟು ಸಾವುಗಳನ್ನು ಗೆಲ್ಲುವ ಶಕ್ತಿ ಅವನಿಗೆ ಬರುವುದು.

"ನಾ ನೀನೆಂಬ ಭೇದ ಅಂದೂ ಇಲ್ಲ, ಇಂದೂ ಇಲ್ಲ.
ಸಾಲೋಕ್ಯನಲ್ಲ, ಸಾಮೀಪ್ಯನಲ್ಲ ಶರಣ.
ಸಾಯುಜ್ಯನಲ್ಲ ಶರಣ.
ಕಾಯನಲ್ಲ, ಅಕಾಯನಲ್ಲ,
ಗುಹೇಶ್ವರಲಿಂಗ ತಾನೆಯಾಗಿ."

ಮಾನವನಿಗೂ ದೇವರಿಗೂ ಮಧ್ಯೆ ಒಂದು ತೆರೆ ಇದೆ – ಮಾಯೆಯ ತೆರೆ. ಅದನ್ನು ನಿವಾರಿಸುವವರೆಗೆ ಮಾನವನ ಆಧ್ಯಾತ್ಮಿಕ, ನೈತಿಕ ಪತನವನ್ನು ತಡೆಗಟ್ಟಲು ಸಾಧ್ಯವಿಲ್ಲ. ಮಾಯೆಯ ಮೋಹಾಕರ್ಷಣೆಯ ಬಗ್ಗೆ ಸಾಧಕ ಎಚ್ಚರನಾಗಿರಬೇಕೆಂದು ಭಾರತೀಯ ಧರ್ಮಸಂಸ್ಥಾಪಕರು ಒತ್ತಿಯೊತ್ತಿ ಹೇಳಿದ್ದಾರೆ. ಹೊನ್ನು, ಹೆಣ್ಣು, ಮಣ್ಣುಗಳ ವಿಲೋಭನೆಯಿಂದ ದೂರವಿರಬೇಕೆಂದು ಅವರು ಎಚ್ಚರಿಸಿದ್ದಾರೆ. ಅಲ್ಲಮನ ದೃಷ್ಟಿಯೇ ಬೇರೆ.

"ಹೊನ್ನು ಮಾಯೆ ಎಂಬರು,
ಹೆಣ್ಣು ಮಾಯೆ ಎಂಬರು,
ಮಣ್ಣು ಮಾಯೆ ಎಂಬರು,
ಹೊನ್ನು ಮಾಯೆಯಲ್ಲ,
ಹೆಣ್ಣು ಮಾಯೆಯಲ್ಲ,
ಮಣ್ಣು ಮಾಯೆಯಲ್ಲ,
ಮನದ ಮುಂದಣಾಸೆಯೆ ಮಾಯೆ ಕಾಣಾ ಗುಹೇಶ್ವರ."

ಆಶಾರಾಹಿತ್ಯ ನಿಷ್ಕಾಮಕರ್ಮಕ್ಕೆ ಎಡೆಮಾಡಿಕೊಡುತ್ತದೆ. ಹೊನ್ನು, ಹೆಣ್ಣು, ಮಣ್ಣುಗಳು ಪಾಪವಸ್ತುಗಳಲ್ಲ. ಮಾನವ ತನ್ನ ಕೀಳಾಸೆಯನ್ನು

ಪ್ರದರ್ಶಿಸಿ ತನ್ನನ್ನೂ ಇವುಗಳನ್ನೂ ಮಲಿನಮಾಡುತ್ತಾನೆ. ಆದರೆ ಮಾಯೆಯ ಶಕ್ತಿ ಉಪೇಕ್ಷಣೀಯವಾದುದಲ್ಲ. ಅವಳ ಮಹಾಶಕ್ತಿಯ ಅರಿವಿರಬೇಕಾದುದು ಅತ್ಯವಶ್ಯಕ.

"ದೇವರನೆಲ್ಲ ಹೊಡೆತಂದು ದೇವಿಯರೊಳು ಕೂಡಿತ್ತು ಮಾಯೆ,
ಹರಹರಾ, ಮಾಯೆ ಇದ್ದೆಡೆಯ ನೋಡಾ.
ಶಿವಶಿವಾ, ಮಾಯೆ ಇದ್ದೆಡೆಯ ನೋಡಾ.
ಎರಡೆಂಭತ್ತು ಕೋಟಿ ಪ್ರಮಥ ಗಣಂಗಳು
ಅಂಗಾಲ ಕಣ್ಣವರು, ಮೈಯೆಲ್ಲಾ ಕಣ್ಣವರು,
ನಂದಿವಾಹನ ರುದ್ರರು,
ಇವರೆಲ್ಲರು ಮಾಯೆಯ ಕಾಲುಗಾಹಿನ ಸರಮಾಲೆ ಕಾಣಾ ಗುಹೇಶ್ವರ."

ಮಾಯೆಗೆ ದಾಸಾನುದಾಸನಾಗುವ ಮಾನವನ ದುಸ್ಥಿತಿಯನ್ನು ಅಲ್ಲಮ ವರ್ಣಿಸುತ್ತಾನೆ.

"ಸಂಸಾರವೆಂಬ ಹೆಣಬಿದ್ದಿರೆ, ತಿನಬಂದ ನಾಯ ಜಗಳವ ನೋಡಿರೆ.
ನಾಯಜಗಳವ ನೋಡಿ ಹೆಣನೆದ್ದು ನಗುತ್ತಿದೆ.
ಗುಹೇಶ್ವರನೆಂಬ ಲಿಂಗ ಅಲ್ಲಿಲ್ಲ ಕಾಣಿರೇ."

ಇದಕ್ಕೆ ಮುಕ್ತಿಯೆಂತು ? ಮಾಯೆಯನ್ನು ಗೆಲ್ಲಲು ಸಾಧ್ಯವೇ ?

"ಮಾಯಾಮಲಿನ ಮನದಿಂದ ಅಗಲದೆ
ಕಾಯದ ದಂದುಗ ಕಳೆಯಿಂದಗಲದೆ
ಅರಿವು ಬರಿದೆ ಬಪ್ಪುದೆ ?
ನಿಜವು ಬರಿದೆ ಸಾಧ್ಯವಪ್ಪುದೆ ಮರುಳೆ ?
ಗುಹೇಶ್ವರ ಲಿಂಗವನರಿಯಬಲ್ಲಡೆ ನಿನ್ನನೀ ತಿಳಿದು ನೋಡಾ."

ಮಾಯೆಯ ಕೌಟಿಲ್ಯಕ್ಕೆ ಆತ್ಮಜ್ಞಾನವೇ ಕುಠಾರ. ನಿಜಾತ್ಮನರಿವಿಲ್ಲದೆ ಮಾನವ ಮಾಯಾಧೀನನಾಗುತ್ತಾನೆ. ಆ ಅರಿವಿನ ಬೆಳಕು ಅವನಲ್ಲಾದರೆ ಮಾಯೆಯೆಂಬ ಕತ್ತಲೆ ಓಡುತ್ತದೆ. ಬೆಳಕಿನ ಮುಂದೆ ಕತ್ತಲೆ ನಿಲ್ಲಬಲ್ಲುದೇ ?

ಸಾಧಕನಾದ ಶಿಷ್ಯನಿಗೆ ದಾರಿ ತೋರಿಸಲು ಒಬ್ಬ ಸದ್ಗುರು ಬೇಕೆಂಬು

ದನ್ನು ಎಲ್ಲ ಮತಾಚಾರ್ಯರೂ ಒತ್ತಿ ಹೇಳುತ್ತಾರೆ. ಗುರುವಿನ ಆವಶ್ಯಕತೆಯನ್ನು ವೇದಾಂತವೂ ಸಮರ್ಥಿಸುತ್ತದೆ. ಉಪನಿಷತ್ತಿನಲ್ಲಿ ಶಿಷ್ಯ ಗುರುವಿನ ಉಪದೇಶವನ್ನು ದೀರ್ಘಕಾಲ ಅನುಸರಿಸಿ, ಕೊನೆಯ ತಿಳಿವಾದ ಬ್ರಹ್ಮಜ್ಞಾನಕ್ಕೆ ಮತ್ತೆ ಗುರುವಿನ ಬಳಿಗೆ ಬರುತ್ತಾನೆ. ಶಿಷ್ಯ ಮುನ್ನಡೆದು ತನ್ನ ಅನುಭವವನ್ನು ಬಂದು ತಿಳಿಸಬೇಕೆಂದು ಗುರು ಹೇಳುತ್ತಾನೆ. ಉತ್ಕ್ರಾಂತಿಯ ಒಂದೇ ಹಂತ ಮುಟ್ಟಿದ ಗುರುಶಿಷ್ಯರಲ್ಲಿ ಭೇದಭಾವ ಅಳಿಯುತ್ತದೆ. ಉಪನಿಷತ್ತಿನ ಭಾವವೈಶಾಲ್ಯ ಅನೇಕಸಲ ಗುರುಶಿಷ್ಯರ ಸ್ಥಾನಗಳನ್ನು ಬದಲಾಯಿಸುತ್ತದೆ. ಗುರು ಶಿಷ್ಯನಾಗುತ್ತಾನೆ, ಶಿಷ್ಯ ಗುರುವಾಗುತ್ತಾನೆ. ಇದಕ್ಕೆ ವೀರಶೈವ ಮತದಲ್ಲಿ ಅವಕಾಶವಿಲ್ಲ. ವೀರಶೈವ ಮತತತ್ತ್ವದಂತೆ ಗುರುವಿನ ಸ್ಥಾನ ಅತ್ಯಂತ ಮಹತ್ತ್ವದ್ದು. ಅವನು ಈಶ್ವರನಿಗಿಂತಲೂ ದೊಡ್ಡವನು. ಶಿಷ್ಯ ಸ್ವಾತಂತ್ರ್ಯವಹಿಸಲು ಸಾಧ್ಯವಿಲ್ಲ. ಗುರುವಿನಪ್ಪಣೆಯಿಲ್ಲದೆ ಅವನು ಒಂದಡಿ ಮುಂದಿಡಲು ಅವಕಾಶವಿಲ್ಲ. ಗುರುಸ್ಥಾನಕ್ಕೆ ವೀರಶೈವ ಪ್ರಮುಖರಲ್ಲೊಬ್ಬನಾದ ಅಲ್ಲಮ ಪ್ರಭು ಈ ಮಹತ್ತ್ವ ಕೊಡದಿರುವುದು ಅಚ್ಚರಿಯಾಗಿದೆ.

"ಪ್ರಣುತೆಯು ಇದೆ. ಬತ್ತಿಯು ಇದೆ.
ಜ್ಯೋತಿಯು ಬೆಳಗುವಡೆ ತೈಲವಿಲ್ಲದೆ ಪ್ರಭೆ ತಾನೆಲ್ಲಿಯದೊ?
ಗುರುವಿದೆ, ಲಿಂಗವಿದೆ
ಶಿಷ್ಯನ ಸುಜ್ಞಾನೋದಯವಾಗದನ್ನಕ್ಕರ ಭಕ್ತಿ ಎಲ್ಲಿಯದೊ?
ಸೋಹಂಮೆಂಬುದ ಕೇಳಿ ದಾಸೋಹವ ಮಾಡದಿರ್ದಡೆ
ಅತಿಗಳವೆ ಗುಹೇಶ್ವರ."

ಸ್ವಮತದಲ್ಲಿ ಹುಟ್ಟಿದವನೆಂದು, ಮತದ ಲಾಂಛನಗಳನ್ನು ಧರಿಸುತ್ತಿರುವವನೆಂದು ಯಾವನನ್ನಾದರೂ ಗುರುವೆಂದು ಒಪ್ಪಿಕೊಳ್ಳಲು ಅಲ್ಲಮ ಸಮ್ಮತಿಸುವುದಿಲ್ಲ. ಗುರುವಿನಿಂದ ಅವನು 'ಗುರುತನ'ವನ್ನು ನಿರೀಕ್ಷಿಸುತ್ತಾನೆ.

"ಅಯ್ಯಾ ನೀನೆನಗೆ ಗುರುವಪ್ಪೊಡೆ, ನಾನಿನಗೆ ಶಿಷ್ಯನಪ್ಪೊಡೆ,
ಎನ್ನ ಕರಣಾದಿ ಗುಣಂಗಳ ಕಳೆದು
ಎನ್ನ ಕಾಯದ ಕರ್ಮವ ತೊಡೆದು

ಎನ್ನ ಪ್ರಾಣದ ಧರ್ಮವ ನಿಲಿಸಿ
ನೀನೆನ್ನ ಕಾಯದಲಡಗಿ
ನೀನೆನ್ನ ಪ್ರಾಣದಲಡಗಿ
ನೀನೆನ್ನ ಭಾವದಲಡಗಿ
ನೀನೆನ್ನ ಕರಸ್ಥಲಕ್ಕೆ ಬಂದು ಕಾರುಣ್ಯವ ಮಾಡು ಗುಹೇಶ್ವರ"

ಮಾನವನ 'ಮಾನವತ್ವ'ವನ್ನು ಉದ್ಧಾರಮಾಡುವುದೇ ಅಲ್ಲಮನ ಧರ್ಮವಾಗಿತ್ತು. ಚೀಣದ ತತ್ತ್ವಜ್ಞಾನಿಗಳಂದ ಲಿನ್ ಯು ಟಾಂಗರು ಹೇಳುವಂತೆ 'ಎಲ್ಲಿ ಮಾನವತ್ವ ಬದುಕಿದೆಯೋ ಅಲ್ಲಿ ಧರ್ಮ ಜೀವದಳೆಯುತ್ತದೆ. ಮಾನವತ್ವ ಅಳಿದಾಗ ಧರ್ಮ ಕ್ಷಯಿಸುತ್ತದೆ.' *

ಜಾತಿ, ಮತಗಳ ಸುವರ್ಣಶೃಂಖಲೆ ಧರಿಸಲು ಅಲ್ಲಮನ ಜ್ಞಾನ, ಅಂತಃಕರಣ ಅಲ್ಲಗಳೆಯಿತು. ಜಾತಿ, ಮತಗಳ ದಭ್ಬಾಳಿಕೆಯನ್ನು ನಿವಾರಿಸಿ ಅವುಗಳ ವ್ಯಾಪ್ತಿಯಿಂದ ಬೆಳೆದಿದ್ದ ಕ್ರೌರ್ಯ, ಸುಲಿಗೆಗಳನ್ನು ತೊಡೆದು ಹಾಕಲು ಉದ್ದೇಶಪಟ್ಟುಕೊಂಡೇ ಹುಟ್ಟಿದ ನವ - ವೀರಶೈವ ಮತ ತಾನೇ ಒಂದು ಜಾತಿಯಾಯಿತು. ಪ್ರಚಲಿತ ಮತ ತತ್ತ್ವಗಳನ್ನು ಖಂಡಿಸುತ್ತಾ ಅದು ನೂತನ ತತ್ತ್ವ ಪ್ರಣಾಳಿಕೆಯನ್ನು ಸ್ಥಾಪಿಸಿ ಜನತೆಯ ವಿಚಾರ ಸ್ವಾತಂತ್ರ್ಯಕ್ಕೆ ಮುಳುವಾಯಿತು.

"ಕುಲದಧಿಕನು ಹೋಗಿ, ಹೊಲಗೇರಿಯಲ್ಲಿ ಮನೆಯ ಕಟ್ಟಿದರೆ
ಕುಲಗೆಡದೆ ಇಪ್ಪ ಪರಿಯ ನೋಡಾ,
ಆತನ ಕುಲದವರೆಲ್ಲರು ಮುಖವ ನೋಡಲೊಲ್ಲದಿದ್ದಾರೆ.
ಕುಲವುಳ್ಳವರೆಲ್ಲರು ಕೈವಿಡಿದರು.
ಕುಲಗೆಟ್ಟವನೆಂದು ತಿಳಿದು ವಿಚಾರಿಸಲು, ಹೊಲೆಗೆಟ್ಟು
ಹೋಯಿತ್ತು ಕಾಣಾ ಗುಹೇಶ್ವರ.''

---

* It has always seemed to me that whenever the Spirit of man lives, religion comes to life again. Whenever the Spirit of man dies, religion decays"

—LIN YU TANG in "The gay genius"
(Life of Su Tungpo)

ಭಾರತದಲ್ಲಿ ಜಾತಿ, ಮತಗಳಿಗೆ ಸಾಮಾಜಿಕ ಹಿನ್ನೆಲೆಯಲ್ಲದೆ ಧಾರ್ಮಿಕ ಹಿನ್ನೆಲೆಯೂ ಇದೆ. ಪ್ರಾಚೀನಕಾಲದ ಸಾಮಾಜಿಕ ವ್ಯವಸ್ಥೆಗನುಗುಣವಾಗಿ ಕೆಲವರು ತಮ್ಮ ಸಂಪೂರ್ಣ ವೇಳೆಯನ್ನು ಮಾನವ ಕಲ್ಯಾಣಕ್ಕಾಗಿ ಪೂಜೆ ಪ್ರಾರ್ಥನೆಯಲ್ಲಿ ಕಳೆಯಬೇಕಾಗಿತ್ತು. ಅವರಿಗೆ ಅನ್ನ, ವಸ್ತ್ರಗಳನ್ನಿತ್ತು ಕಾಪಾಡುವ ಉತ್ತರವಾದಿತನ ಇತರರದಾಗಿತ್ತು. ಆದರೆ ಈ ಧರ್ಮ ಪರಾಯಣರು ಮರೆತು ತಮ್ಮ ಉನ್ನತಜ್ಞಾನವನ್ನು ಸ್ವಪ್ರತಿಷ್ಠೆಯ ಪ್ರಸಾರಕ್ಕೆ ಉಪಯೋಗಿಸಿಕೊಳ್ಳಲಾರಂಭಿಸಿದರು. ಅವರ ಕೈಯಲ್ಲಿ ಧರ್ಮ ಹಲವು ವಿಧಿ, ನಿಷೇಧಗಳ, ಸಮಯಾಚಾರಗಳ ಬೊಂತೆಯಾಯಿತು. ಆಚಾರ ಗಳ ಮೂಲೋದ್ದೇಶ ಮರೆಯಾಗಿ, ಕೇವಲ ಅವುಗಳ ಹೊರಗಣ ರೂಪ ಮಾತ್ರ ರಕ್ಷಿಸಲ್ಪಟ್ಟಿತು. ಧರ್ಮ ತನ್ನ ಆಧ್ಯಾತ್ಮಿಕ ಹೆಚ್ಚಳವನ್ನು ನೀಗಿ ಕೊಂಡು ಒಂದು ವೃತ್ತಿಯಾಯಿತು. ಈ ಪರಿಸ್ಥಿತಿಯನ್ನು ಅಲ್ಲಮ ಚೆನ್ನಾಗಿ ವಿವರಿಸುತ್ತಾನೆ

"ಅಗ್ಗವಣಿ ಪತ್ರೆ, ಪುಷ್ಪ, ಧೂಪ, ದೀಪ, ನೀವಾಳಿಯಲ್ಲಿ
ಪೂಜಿಸಿ ಪೂಜಿಸಿ ಬಳಲುತ್ತಿದ್ದಾರೆ.
ಏನೆಂದರಿಯರು, ಎಂತೆಂದರಿಯರು.
ಜನ ಮರುಳೊ ಜಾತ್ರೆ ಮರುಳೊ ಎಂಬಂತೆ ಎಲ್ಲರೂ ಪೂಜಿಸಿ
ಏನನೂ ಕಾಣದೆ ಲಯಕ್ಕೊಳಗಾಗಿ ಹೋದರು ಗುಹೇಶ್ವರ."

"ಉದಯವಾಯಿತ್ತ ಕಂಡು ಉದರಕ್ಕೆ ಕುದಿವರಯ್ಯ.
ಕತ್ತಲೆಯಾಯಿತ್ತ ಕಂಡು ಮಜ್ಜನಕ್ಕೆರೆವರಯ್ಯಾ.
ಲಿಂಗಕ್ಕೆ ನೇಮವಿಲ್ಲ.
ಇರುಳಿಗೊಂದು ನೇಮ, ಹಗಲಿಗೊಂದು ನೇಮ.
ಲಿಂಗಕ್ಕೆ ನೇಮವಿಲ್ಲ.
ಕಾಯ ಒಂದೆಸೆ, ಜೀವ ಒಂದೆಸೆ.
ಗುಹೇಶ್ವರನೆಂಬ ಲಿಂಗವು ತಾನೊಂದೆಸೆ."

"ಮಜ್ಜನಕ್ಕೆರೆದು ಫಲವ ಬೇಡುವರಯ್ಯಾ.
ತಮಗೆಲ್ಲಿಯದೊ ಆ ಫಲವು ನೀತಾಳಕ್ಕಲ್ಲದೆ!

ಪತ್ರೆ ಪುಷ್ಪದಲ್ಲಿ ಪೂಜಿಸಿ ಫಲವ ಬೇಡುವರು.
ತಮಗೆಲ್ಲಿಯದೊ ಆ ಫಲವು ಗಿಡಗಳಿಗಲ್ಲದೆ!
ಸುಯಿಧಾನವನರ್ಪಿಸಿ ಪ್ರಸಾದವ ಬೇಡುವರು.
ತಮಗೆಲ್ಲಿಯದೊ ಆ ಫಲವು ಹದಿನೆಂಟು ಧಾನ್ಯಕ್ಕಲ್ಲದೆ!
ಅಂಗದೊಡವೆಯ ಲಿಂಗಕ್ಕೆ ಕೊಟ್ಟು, ಫಲವ ಬೇಡುವ
ಸರ್ವ ಅನ್ಯಾಯಿಗಳನೇನೆಂಬೆ ಗುಹೇಶ್ವರ.''

ದೇವರಿಗೆ ಅರ್ಪಿತವಾಗುವ ಆಹಾರ, ವಸ್ತ್ರಗಳು ಮಾನವನ ಲೋಭ ತೃಪ್ತಿಯ ಸಾಧನಗಳಲ್ಲವೇ? ದೇವರು ಅವತರಿಸಿ ಆಹಾರ ಸ್ವೀಕರಿಸುತ್ತಾನೆಯೇ, ವಸ್ತ್ರ ಧರಿಸುತ್ತಾನೆಯೇ?

ತೀರ್ಥಯಾತ್ರೆಗಳನ್ನು ಮಾಡಿ, ಪುಣ್ಯನದಿಗಳಲ್ಲಿ ಮುಳುಗೇಳುವ ಪದ್ಧತಿಯನ್ನೂ ಅಲ್ಲಮ ಖಂಡಿಸುತ್ತಾನೆ.

"ಸುತ್ತಿ ಸುತ್ತಿ ಬಂದಡಿಲ್ಲ.
ತುಟ್ಟತುದಿಯ ಮೇರುಗಿರಿಯ ಮುಟ್ಟಿ ಕೂಗಿಡಡಲ್ಲಿ
ನಿತ್ಯ ನೇಮದಿಂದ ತನುವ ಮುಟ್ಟಿಕೊಂಡಡಿಲ್ಲ.
ನಿಚ್ಚಕ್ಕೆ ನಿಚ್ಚ ನೆನೆವ ಮನವ ಅಂದಂದಿಗೆ ಅತ್ತಲಿತ್ತ
ಹರಿವ ಮನವ ಚಿತ್ತದಲ್ಲಿ ನಿಲಿಸಬಲ್ಲಡೆ
ಬಚ್ಚಬರಿಯ ಬೆಳಗು ಗುಹೇಶ್ವರಲಿಂಗವು.''

ಬ್ರಹ್ಮಚಾರಿ, ಸನ್ಯಾಸಿ ವೇಷಧರಿಸಿ ಲೋಕದ ಕಣ್ಣಿಗೆ ಮಣ್ಣೆರಚುವವರನ್ನೂ ಅಲ್ಲಮ ವಿಚಾರಿಸಿಕೊಂಡಿದ್ದಾನೆ.

''ಭಸ್ಮವ ಪೂಸಿ ಬತ್ತಲೆ ಇದ್ದರೇನು ಬ್ರಹ್ಮಚಾರಿಯೆ?
ಅಶನವನುಂಡು ವ್ಯಸನವ ಮರೆದಡೇನು ಬ್ರಹ್ಮಚಾರಿಯೆ?
ಭಾವ ಬತ್ತಲೆ ಇದ್ದು ಮನವು ಗಂಭೀರವಾಗಿದ್ದರೆ
ಅದು ಸಹಜ ನಿರ್ವಾಣ ಕಾಣಾ ಗುಹೇಶ್ವರ.''

''ತನು ಬತ್ತಲೆ ಇದ್ದಡೇನು, ಮನ ಶುಚಿಯಾಗದನ್ನಕ್ಕರ.
ಮಂಡೆ ಬೋಳಾದಡೇನು ಭಾವ ಬಯಲಾಗದನ್ನಕ್ಕರ.

ಭಸ್ಮವ ಪೂಸಿದಡೇನು ಕರಣಾದಿ ಗುಣಂಗಳನೊತ್ತಿ
ಮೆಟ್ಟಿ ಸುಡದನ್ನಕ್ಕರ.
ಇಂತೀ ಆಶೆಯು ವೇಷದ ಭಾಷೆಗೆ ನೀ ಸಾಕ್ಷಿಯಾಗಿ
ಛೀಯೆಂದು ಕಳೆಯುವೆನು ಗುಹೇಶ್ವರ.''

ಗೋರಕ್ಷನಾಥನನ್ನು ಗೆಲ್ದ ಅಲ್ಲಮ ತಂತ್ರವಿದ್ಯೆಯ ಬಲದಿಂದ ದೇಹವನ್ನು ಶಕ್ತಿಪರ್ವತ ಮಾಡುವುದನ್ನು ಖಂಡಿಸುತ್ತಾನೆ. ಸುದೃಢದೇಹದಲ್ಲಿ ಸುದೃಢ ಮನಸ್ಸಿರಬೇಕೆಂಬುದರ ಬಗ್ಗೆ ಅವನ ಆಕ್ಷೇಪವಿಲ್ಲ. ದೇಹದ ಬೆಳವಳಿಗೆಯೂ ಮನಸ್ಸಿನ ಬೆಳವಳಿಗೆಗೆ ಅಧೀನವಾಗಿರಬೇಕೆಂಬುದೇ ಅವನ ವಾದ. ಮಾನವನಿಗೆ ತಾಮಸ ಶಕ್ತಿಗಳನ್ನಿತ್ತು ಅವನನ್ನು ಕರ್ತವ್ಯಭ್ರಷ್ಟನನ್ನಾಗಿ ಮಾಡುವ ತಾಂತ್ರಿಕ ಸಾಧನೆಗಳನ್ನು ಅಲ್ಲಮ ನಿರಾಕರಿಸುತ್ತಾನೆ. ಸಣ್ಣಪುಟ್ಟ ಶಕ್ತಿಯಾರ್ಜನೆಗೆ ಮನಸೋತು ಮಾನವ ತನ್ನ ನಿಜಗುರಿಯನ್ನು ಮರೆಯುವುದಲ್ಲದೆ, ಆ ಶಕ್ತಿಗಳ ದುರುಪಯೋಗ ಪಡಿಸಿಕೊಂಡು ಲೋಕಕಂಟಕನಾಗುತ್ತಾನೆ.

''ನಾರು ಬೇರಿನ ಕುಟಿಲ ಕುಹಕದ ಕಪಟ
ಯೋಗವಿದು ನಿಲ್ಲಿಭೋ
ಕಾಯುಸಮಾಧಿ, ಕರಣಸಮಾಧಿ, ಜೀವಸಮಾಧಿ
ಯೋಗ ಬಲಿದು ನಿಲ್ಲಿಭೋ.
ನಿಜ ಸಹಜ ಸಮಾಧಿ ಗುಹೇಶ್ವರ.''

ಅಲ್ಲಮ ನಮ್ಮ ನಂಬಿಕೆಗಳು, ಆಚರಣೆಗಳು, ತತ್ತ್ವಗಳನ್ನು ಪುಡಿಗುಟ್ಟುತ್ತಿರುವುದನ್ನು ಇದುವರೆಗೆ ನೋಡಿದೆವು. ನಾವು ನಂಬಿರುವ ತತ್ತ್ವ, ಆಚರಣೆ, ನಂಬಿಕೆಗಳನ್ನು ಅವನು ವಿರೋಧಿಸುವಾಗ–'ಇವುಗಳ ಪ್ರತಿಯಾಗಿ ಏನು ಕೊಡಬಲ್ಲೆ ?' ಎಂದು ಸಹಜವಾಗಿ ಕೇಳುತ್ತೇವೆ. ಇರುವುದನ್ನು ನಾಶಮಾಡುವುದು ಸುಲಭ, ಆದರೆ ಅದರೆಡೆಯಲ್ಲಿ ಬೇರೆಯದನ್ನು ಸ್ಥಾಪಿಸುವುದು ತಾನೆ ಕಷ್ಟ. ಅಲ್ಲಮ ಹೇಳುವುದು 'ನಿಮ್ಮನ್ನು ನೀವು ಶುದ್ಧಿಮಾಡಿಕೊಳ್ಳಿ. ಮನಸ್ಸಿನಮೇಲೆ ಕುಳಿತಿರುವ ಮಾಯಾಮಲಿನವನ್ನು ನೀಗಿಕೊಳ್ಳಿ. ಕೊಳಕು ಹೋದ ಮೇಲೆ ಉಳಿಯುವುದೇ ಬೆಳಕು. ಇಷ್ಟೇ

ಹೇಳಿ ಅವನು ತೃಪ್ತನಾಗಿಲ್ಲ. ನಮ್ಮ ಮುಂದೆ ರಚನಾತ್ಮಕ ಕಾರ್ಯ ವಿಧಾನವನ್ನು ಇಡುತ್ತಾನೆ. ಜೀವನ್ಮುಕ್ತಿ ಬಯಸುವವನು ಕರ್ಮಪಂಜರದಲ್ಲಿ ಸೆರೆಸಿಕ್ಕಿರುವ ಜೀವನನ್ನು ಬಿಡುಗಡೆ ಮಾಡಬೇಕೆಂದು ಅವನು ಹೇಳುತ್ತಾನೆ

"ಸೃಷ್ಟಿಗೆ ಹುಟ್ಟಿದ ಶಿಲೆ
ಕಲ್ಲು ಕುಟಿಕಂಗೆ ಹುಟ್ಟಿದ ಮೂರುತಿ
ಮಂತ್ರಕ್ಕೆ ಲಿಂಗವಾಯಿತ್ತಲ್ಲಾ.
ಈ ಮೂವರಿಗೆ ಹುಟ್ಟಿದ ಮಗನ ಲಿಂಗವೆಂದು
ಕೆಯ್ಯಿಡಿವ ಅಚ್ಚವ್ರತಗೇಡಿಗಳನೇನೆಂಬೆ ಗುಹೇಶ್ವರ."

ಆಧ್ಯಾತ್ಮಿಕ ಗುರಿಗೆ ಸಾಕಾರತ್ವ ಕೊಡುವ ಮಾನವಬಯಕೆಯನ್ನೂ ಅಲ್ಲಮು ಲಕ್ಷ್ಯದಲ್ಲಿಟ್ಟುಕೊಂಡಿದ್ದಾನೆ. ಪ್ರಾಪಂಚಿಕ ಮಾರ್ಗದಲ್ಲಿಯೇ ನಮ್ಮೊಂದಿಗೆ ನಡೆನುಬಂದು, ನಮ್ಮನ್ನು ಆಧ್ಯಾತ್ಮಿಕ ಜಗತ್ತಿಗೆ ಕರೆದುಕೊಂಡು ಹೋಗುತ್ತಾನೆ.

"ಕಾಲೇ ಕಂಬಗಳೆನ್ನ ದೇಹವೇ ದೇಗುಲವಾಯಿತ್ತಯ್ಯಾ.
ಎನ್ನ ನಾಲಿಗೆಯೇ ಗಂಟೆ, ಶಿರ ಸುವರ್ಣದ ಕಳಸ ಇದೇನಯ್ಯಾ.
ಸರವೇ ಲಿಂಗಕ್ಕೆ ಸಿಂಹಾಸನವಾಗಿರ್ದುದು.
ಗುಹೇಶ್ವರ, ನಿಮ್ಮ ಪ್ರಾಣಲಿಂಗ ಪ್ರತಿಷ್ಠೆ ಪಲ್ಲಟವಾಗಿರ್ದೆನಯ್ಯಾ."

"ದೇಹದೊಳಗೆ ದೇವಾಲಯವಿರ್ದು ಮತ್ತೆ
ಬೇರೆ ದೇವಾಲಯವೇಕೆ?
ಎರಡಕ್ಕೆ ಹೇಳಲಿಲ್ಲಯ್ಯಾ.
ಗುಹೇಶ್ವರ, ನೀನು ಕಲ್ಲಾದರೆ ನಾನೇನಪ್ಪೆನು."

ತನ್ನ ಕನಸಿನ ವಿಶ್ವದೇವನನ್ನು ಅಲ್ಲಮು ಅನುಪಮವಾಗಿ ಚಿತ್ರಿಸುತ್ತಾನೆ.

"ಬಿಸಿಲೆಂಬ ಗುರುವಿಗೆ ನೆಳಲೆಂಬ ಶಿಷ್ಯ.
ನಿರಾಳಲಿಂಗಕ್ಕೆ ಬಯಲೇ ಸೆಜ್ಜೆ.

ವಾಯುವೇ ಶಿವದಾರ.
ಬೆಳಗೇ ಸಿಂಹಾಸನ.
ಅತ್ತಲಿತ್ತ ಚಿತ್ತವ ಹರಿಯಲೀಯದೆ ಮಜ್ಜನಕ್ಕೆರೆದು
ಸುಖಿಯಾದೆ ಗುಹೇಶ್ವರ.''

ವಿಶ್ವದೇವನ ಮಂದಿರದಲ್ಲಿಯೂ ವಿಧ್ಯುಕ್ತ ಆಚಾರಗಳಿವೆ. ಆದರವು ಸಂಪ್ರದಾಯದ ಆಚಾರಗಳಲ್ಲ.

''ಗಗನವೇ ಗುಂಡಿಗೆ, ಆಕಾಶವೇ ಅಗ್ಗವಣಿ,
ಚಂದ್ರ ಸೂರ್ಯರಿಬ್ಬರೂ ಪುಷ್ಪ,
ಬ್ರಹ್ಮ ಧೂಪ, ವಿಷ್ಣುದೀಪ, ರುದ್ರನೋಗರ ಸಯಿಧಾನ ನೋಡಾ.
ಗುಹೇಶ್ವರ ಲಿಂಗಕ್ಕೆ ಪೂಜೆ ನೋಡಾ.''

''ಹೊರಗನೆ ಕೊಯ್ದು ಹೊರಗನೆ ಪೂಜಿಸಿದವರ
ಕಂಡು ನಾಚಿದೆನಯ್ಯಾ,
ಒಳಗೊಂದು ಅನಿಮಿಷ ಲಿಂಗವ ಕಂಡು,
ಎನ್ನ ಮನೋಪುಷ್ಪದಲ್ಲಿ ಪೂಜೆಯ ಮಾಡಿದರೆ
ನಾಚಿಕೆ ಮಾದು ನಿಸ್ಸಂದೇಹಿಯಾದೆನು ಗುಹೇಶ್ವರ.''

ಜಗತ್ತನ್ನೇ ನಿರ್ಮಿಸಿದ ಕರ್ತ ಪ್ರತಿಫಲವನ್ನು ನಿರೀಕ್ಷಿಸುತ್ತಾನೆಯೇ? ಸರ್ವಾಂಗಸುಂದರನೂ ಸರ್ವಶಕ್ತಿಮಯನೂ, ಸರ್ವಪರಿಪೂರ್ಣನೂ ಆದ ಅವನಿಗೆ ನಾವೇನು ಕೊಡಬಲ್ಲೆವು?

''ಮಜ್ಜನಕ್ಕೆರೆವಡೆ ನೀನು ಶುದ್ಧ ನಿರ್ಮಲದೇಹಿ.
ಪೂಜೆಯ ಮಾಡುವಡೆ ನಿನಗೆ ಗಗನ ಕಮಲ
ಕುಸುಮದ ಅಖಂಡ ಪೂಜೆ.
ಧೂಪ ದೀಪಾರತಿಗಳ ಬೆಳಗುವಡೆ ನೀನು
ಸ್ವಯಂಜ್ಯೋತಿ ಪ್ರಕಾಶನು.
ಅರ್ಚನೆಯ ಮಾಡುವಡೆ ನೀನು ಮುಟ್ಟಬಾರದ ಘನವೇದ್ಯನು.
ನಿತ್ಯನೇಮಂಗಳ ಮಾಡುವಡೆ ನಿನಗೆ ಅನಂತ
ನಾಮಂಗಳಾದವು ಗುಹೇಶ್ವರ.''

ಸಾಧಕ ಏನು ಮಾಡಬಹುದು? ಪರಂಜ್ಯೋತಿಗೆ ಅವನು ಏನನ್ನು ಅರ್ಪಿಸಬಹುದು? ಅಲ್ಲಮ ಹೇಳುತ್ತಾನೆ – 'ನಿನ್ನನೇ ನೀನು ಅರ್ಪಿಸಿಕೋ. ನೀನೇ ಪರಂಜ್ಯೋತಿಯಾಗು.'

ತನ್ನದೇ ಆದ ವಿಶಿಷ್ಟರೀತಿಯಲ್ಲಿ ಅಲ್ಲಮ ಆಧ್ಯಾತ್ಮಿಕ ಸ್ವಾತಂತ್ರ್ಯ, ಸಾಧನೆಯ ರಹಸ್ಯವನ್ನರುಹುತ್ತಾನೆ.

"ರಂಗ ಒಂದೆ, ಕಂಬ ಒಂದೆ,
ದೇವರೊಂದೆ, ದೇಗುಲ ಒಂದೆ.
ಗುಹೇಶ್ವರ, ನಿಮ್ಮ ಮನ್ನಣೆಯ ಶರಣರೇ ದೇವರೆಂಬೆ."

ಜೀವನದ ಉನ್ನತೋನ್ನತ ಆದರ್ಶವನ್ನು, ಧರ್ಮದ ನಿತ್ಯ ನಿರ್ಮಲ ಸ್ವರೂಪವನ್ನು ಅರಸಿದವನು ಅಲ್ಲಮಪ್ರಭು. ಸೀಮಾತೀತವಾದದ್ದು ಅವನ ಧರ್ಮ. ಎಲ್ಲ ಧರ್ಮಮಾರ್ಗಗಳ ಆಧ್ಯಾತ್ಮಿಕ ಬೆಲೆಯನ್ನವನು ಅರಿತುಕೊಂಡಿದ್ದ. ಧರ್ಮಕ್ಕೆ ವಿಶಾಲವಾದ, ವಿಶ್ವತೋಮುಖವಾದ ಅರ್ಥವನ್ನು ಕೊಡುವುದಕ್ಕೆ ಅಲ್ಲಮ ತನ್ನ ಬಾಳನ್ನು ನಿವೇದಿಸಿದ. ಅಪಗತಿಯನ್ನಪ್ಪಿಕೊಳ್ಳುತ್ತಿದ್ದ ಮಾನವನನ್ನು ಅವನು ಖಂಡಿಸಿದಂತೆ, ಔನ್ನತ್ಯದ ಮಾರ್ಗವನ್ನು ಅವಿಷ್ಕಾರಮಾಡಿದ. ನವ – ವೀರಶೈವ ಮತದ ಇತರ ನಾಯಕರಿಗಿಂತಲೂ ಹೆಚ್ಚಾಗಿ ಅಲ್ಲಮ ಮಾನವನ ದೇವತ್ವವನ್ನು ಸ್ಥಾಪಿಸಿದ. ಮಾನವನ ತಿಳುವಳಿಕೆ, ಆಧ್ಯಾತ್ಮಿಕ ಪ್ರಗತಿ, ಆತ್ಮಕಲ್ಯಾಣಗಳನ್ನು ಸಾಧಿಸಲೆತ್ನಿಸಿದ ವಿಶ್ವಾರಾಧ್ಯರಲ್ಲಿ ಅಲ್ಲಮನಿಗೆ ಸ್ಥಾನ. ಅವನನ್ನು ಪಡೆದ ನಾಡು ಧನ್ಯ.

---

# ೧೧. ಬಸವಣ್ಣನವರನ್ನು ನೋಡುವ ದೃಷ್ಟಿ

ಬಸವಣ್ಣನವರನ್ನು ಎರಡು ದೃಷ್ಟಿಯಿಂದ ನೋಡಬಹುದು. ಒಂದು ಸಂಪ್ರದಾಯದ, ಸಮಾಜದ ಕಣ್ಣು; ಎರಡು ಪ್ರಗತಿಯ, ಲೋಕದ ಕಣ್ಣು. ಸಂಪ್ರದಾಯ, ಸಮಾಜ ಹೇಳುತ್ತದೆ: 'ಅವರು ದೊಡ್ಡವರು ಬಹಳ ದೊಡ್ಡವರು. ಅವರಿಗಿಂತ ದೊಡ್ಡವರು ಹಿಂದೆ ಆಗಲಿಲ್ಲ; ಮುಂದೆ ಆಗುವುದಿಲ್ಲ.' ಇದೇ ಮಾತನ್ನು ಇಸ್ಲಾಂ, ಕ್ರಿಸ್ತ ಧರ್ಮಗಳೂ ಹೇಳಿದವು. ಪ್ರಗತಿ ಹೇಳುತ್ತದೆ: 'ಅವರು ದೊಡ್ಡವರು. ಅದು ನಿರ್ವಿವಾದ. ಆದರೆ ಇತರ ದೊಡ್ಡವರನ್ನೂ ನೋಡೋಣ. ದೊಡ್ಡವರಿಗಿಂತಲೂ ದೊಡ್ಡಗುಣ ಹಿರಿದು. ಆ ಗುಣ ಎಲ್ಲಿದ್ದರೂ ಪೂಜಾರ್ಹವಾದುದು, ಧಾರ್ಮಿಕ ಕಟುಭಾವನೆಯೇ ಜಗತ್ತಿನ ಎಲ್ಲ ಅನರ್ಥಕ್ಕೂ ಮೂಲ.'

ಈ ಅಸಹನೆ, ಆಸುರೀವೃತ್ತಿ ಅಡಗಬೇಕಾದರೆ ಹೊಸದಾಗಿ ಒಂದು ಧರ್ಮವನ್ನು ಹುಟ್ಟಿಹಾಕಬೇಕಾಗಿಲ್ಲ. **ಮುಹಮುದ್ ಪೈಗಂಬರರು** ಹೇಳುತ್ತಾರೆ: "ನಾನು ಈಗ ನಿಮಗೆ ಹೇಳುತ್ತಿರುವ ಪವಿತ್ರ ಕೊರಾನನ್ನು ಪ್ರಾಚೀನ ಋಷಿಗಳ ಬರೆವಣಿಗೆಗಳಲ್ಲಿ ನೀವು ಕಾಣಬಹುದು. ಪ್ರವಾದಿಗಳನ್ನು ಎಲ್ಲಾ ಜನಾಂಗಗಳಿಗೂ ಕಳಿಸಲಾಗಿದೆ. ಮಾನವಕೋಟಿಯ ಯಾವ ಸಮಾಜಕ್ಕೂ ಮಾರ್ಗದರ್ಶಕ ಹೋಗದೆ ಇಲ್ಲ. ಈ ಪ್ರವಾದಿಗಳಲ್ಲಿ ಯಾವ ಭಿನ್ನಾಭಿಪ್ರಾಯವೂ ಇಲ್ಲ. ಕಳಿಸಲ್ಪಟ್ಟವರೆಲ್ಲಾ ಒಂದೇ ಸತ್ಯವನ್ನು ಸಾರುವುದಕ್ಕಾಗಿ ಕಳಿಸಲ್ಪಟ್ಟವರು. ನಾನೇ ದೇವರು. ನಾನಲ್ಲದೆ ಬೇರೆ ದೇವರಿಲ್ಲ. ನಾನು ವಿಶ್ವಾತ್ಮನಾಗಿದ್ದೇನೆ. ನಾನೊಬ್ಬನೇ ಪೂಜಾರ್ಹ. ಪ್ರತಿಯೊಂದು ದೇಶ, ಜನಾಂಗಕ್ಕೂ ಪ್ರವಾದಿಗಳು ಆಯಾ ದೇಶಭಾಷೆಯಲ್ಲಿಯೇ ತಿಳಿವು ಕೊಡಲು ಕಳಿಸಲ್ಪಟ್ಟವರು!"

ಈ ಮಾತಿನ ಅರ್ಥವನ್ನು ನಾವು ಪೂರ್ಣವಾಗಿ ಗ್ರಹಿಸಿದರೆ **ಕೃಷ್ಣ, ಪೈಗಂಬರ, ಯೇಸು, ಬಸವೇಶ್ವರ, ಜರತುಷ್ಟ್ರ, ಮಹಾವೀರ, ಬುದ್ಧ**

ಇವರಲ್ಲಿ ಯಾರು ದೊಡ್ಡವರು ಎನ್ನುವ ಸ್ವಮತಸ್ಥರ ವಿಚಾರಶೂನ್ಯವಾದಕ್ಕೆ ಅಸ್ತಿತ್ವವಿಲ್ಲದೆ ಹೋಗುತ್ತದೆ.

ದೊಡ್ಡವರನ್ನು ಪೂಜಿಸಿ ನಾವು ಕಲಿತುದೇನು ? ಅವರೇ ದೊಡ್ಡವರು, ಇನ್ನು ಯಾರೂ ಅಲ್ಲ ಎನ್ನುವ ಸಂಕುಚಿತ ಮನೋಭಾವ. ಅವರ ದೊಡ್ಡಸ್ತಿಕೆಯನ್ನು ಎತ್ತಿಹಿಡಿಯುವ ಹಟಮಾರಿತನದಲ್ಲಿ ಇತರರನ್ನು ಅಲ್ಲಗಳೆಯುವ ಅಲ್ಪತನ. ವ್ಯಕ್ತಿಪೂಜೆಯನ್ನು ಮುಗಿಸಿ ನಾವಿನ್ನು ಗುಣಪೂಜೆ ಆರಂಭಿಸಬೇಕು. ನಾವು ಆಚರಿಸಬೇಕಾದುದು ಬಸವ ಜಯಂತಿಯನ್ನಲ್ಲ; ಆ ಮಹಾನುಭಾವನ ಜೀವನ ಸಂದೇಶದ ಜಯಂತಿಯನ್ನು. ವ್ಯಕ್ತಿಯ ಪ್ರಾಗಲ್ಭ್ಯ ಪ್ರಸಾರಕ್ಕಿಂತ ತತ್ವದ ಪ್ರಾಗಲ್ಭ್ಯ ಪ್ರಚಾರ ಮುಖ್ಯ.

ಬಸವಣ್ಣನವರ ತತ್ವಗಳನ್ನು ನೋಡಬೇಕಾದುದು, ಅವರಿಂದ ಲೋಕಕ್ಕೆ ಆದ ಉಪಕಾರವೇನು ? ಮುಂದೆ ಆಗಬೇಕಾದ ಪ್ರಯೋಜನ ವೇನು ? ಎನ್ನುವ ದೃಷ್ಟಿಯಿಂದ. ಬಸವಣ್ಣನವರನ್ನು ಒಂದು ಸಣ್ಣ ಸಮಾಜದ ಕಿರುಹಣತೆಯಾಗಿ ಕಾಣಬೇಕೇ ಲೋಕಗುರುವಾಗಿ ಕಾಣಬೇಕೇ ಎನ್ನುವ ಪ್ರಶ್ನೆ ನಮ್ಮ ಮುಂದೆ ನಿಂತಿದೆ.

ವಿಶ್ವಾಚಾರ್ಯರ ಪಂಕ್ತಿಯಲ್ಲಿ ಬಸವಣ್ಣನವರನ್ನು ಕೂಡಿಸಿ ತಾತ್ವಿಕ ಸಮನ್ವಯವನ್ನು ನಾವು ನೋಡಬಹುದು.

'ಸತ್ಯ ಒಂದೇ ಆಗಿದೆ. ಅದನ್ನು ತಿಳಿದವರು ಬಗೆಬಗೆಯಲ್ಲಿ ಬಣ್ಣಿಸುತ್ತಾರೆ'—ಎಂದು **ಉಪನಿಷತ್ತು** ಹೇಳಿತು. **ಭಗವದ್ಗೀತೆ,** 'ಎಲ್ಲಾ ಮಾನವರು ಒಂದೇ ಗುರಿಗೆ ಸಾಗುತ್ತಿದ್ದಾರೆ. ಅವರು ಬೇರೆ ಬೇರೆ ಮಾರ್ಗಗಳನ್ನು ಅನುಸರಿಸುತ್ತಿದ್ದಾರೆ.' ಎಂದು ಹೇಳಿದೆ. **ಸುತ್ತನಿಪಾತ** ಹೇಳಿತು : 'ಸತ್ಯ ಒಂದೇ. ಅದು ಏಕಮೇವಾದ್ವಿತೀಯ. ಅದರ ಬಗ್ಗೆ ಜಾಣರು ಚರ್ಚಿಸಬಹುದು' 'ಎಲ್ಲಾ ಪ್ರವಾದಿಗಳು ಸಾರುವುದು ಒಂದೇ ಸತ್ಯವನ್ನು' ಎಂದು **ಇಸ್ಲಾಂ** ಒಪ್ಪಿಕೊಂಡಿದೆ. 'ನಾನು ಪ್ರವಾದಿಗಳ ತತ್ವವನ್ನು (ದೇವರು ಒಬ್ಬನೇ ಎಂಬ) ಪೂರ್ಣಗೊಳಿಸಲು ಬಂದಿದ್ದೇನೆ. ನಾಶಗೊಳಿಸುವುದಕ್ಕಲ್ಲ' ಎಂದು **ಏಸು** ಹೇಳಿದ್ದಾನೆ. ಇದೇ ಅಭಿಪ್ರಾಯವನ್ನು ಬಸವಣ್ಣನವರು, 'ದೇವನೊಬ್ಬ, ನಾಮ ಹಲವು. ಪರಮ ಪತಿವ್ರತೆಗೆ ಗಂಡನೊಬ್ಬ ಕಾಣಿರೋ' ಎಂದು ಹೇಳಿದ್ದಾರೆ.

ದೇವನೊಬ್ಬ. ಅವನಿಗೆ ಸಮಸ್ತವನ್ನು ಅರ್ಪಿಸಬೇಕು ಎಂದು ಹೇಳುವುದು ಸುಲಭ; ಆಚರಣೆಗೆ ತರುವುದು ಕಷ್ಟ. ಸಾಧಕನಿಗೆ ಈ ಘನತತ್ವದ ಅರಿವಾಗಬೇಕಾದರೆ ಅವನೂ ಒಳಗೂ, ಹೊರಗೂ ಪರಿಶುದ್ಧನಾಗಬೇಕು. ಅಣುರೇಣು ತೃಣಕಾಷ್ಠವನ್ನೂ ಪರಮಾತ್ಮನ ಸ್ವರೂಪ ಎಂದು ನೋಡಲು ಅವನು ಸಿದ್ಧನಾಗಬೇಕು. ಅವನ ಹೃದಯದಲ್ಲಿ ಸರ್ವ ಜೀವಕೋಟಿಗೂ ಸಮಾನಸ್ಥಾನವಿರಬೇಕು. ತನ್ನಂತೆ ಇತರರು ಎಂದು ಅವನು ಬಗೆಯಬೇಕು.

'ನಿನಗೆ ಇತರರು ಏನು ಏನು ಮಾಡಬೇಕೆಂದು ಬಯಸುವಿಯೋ ಅದನ್ನು ಅವರಿಗೆ ಮಾಡು. ಇದೇ ಪ್ರವಾದಿಗಳ ತತ್ವ' ಎಂದು **ಏಸು** ಹೇಳಿದ್ದಾನೆ.

'ನೀನು ಯಾವುದನ್ನು ಅನುಭವಿಸಲು ಸಿದ್ಧನಾಗಿಲ್ಲವೋ ಅದನ್ನು ಇತರರು ಅನುಭವಿಸುವಂತೆ ಮಾಡಬೇಡ. ನಿನಗೆ ದಾಸನಾಗಿರಲು ಇಷ್ಟವಿಲ್ಲ. ಹಾಗೆಯೇ ಇತರರು ದಾಸರಾಗದಂತೆ ನೋಡಿಕೋ' ಎಂದು **ಎಪಿಕ್ಟಿಟಸ್** ಹೇಳಿದ್ದಾನೆ. 'ಸುಖದಲ್ಲಿ, ದುಃಖದಲ್ಲಿ ಎಲ್ಲ ಜೀವಕೋಟಿಗಳನ್ನೂ ನಮ್ಮ ಆತ್ಮನ ಪ್ರತಿಚ್ಛಾಯೆಯಂತೆ ನೋಡಬೇಕು. ನಮಗೆ ವಿಧಾಯಕವಾದ ನೋವು ಹೇಗೆ ಅಸಹನೀಯವೋ ಹಾಗೆ ಇತರರಿಗೆ ವಿಧಾಯಕವಾದ ನೋವೂ ಅಸಹನೀಯ ಎಂಬುದನ್ನು ಗ್ರಹಿಸು. ಯಾರಿಗೂ ನೋವುಂಟು ಮಾಡದಂತೆ ಎಚ್ಚರವಾಗಿರಬೇಕು' ಎಂದು **ಜೈನಧರ್ಮ** ಬೋಧಿಸುತ್ತದೆ. 'ಪರಹಿಂಸೆಯಲ್ಲಿ ಪ್ರವೃತ್ತನಾಗಬೇಡ' ಎಂದು **ಮಹಾಭಾರತ** ಸಾರಿ ಸಾರಿ ಹೇಳುತ್ತದೆ.

ಬಸವಣ್ಣನವರು, 'ಕೊಲ್ಲುವವನೇ ಮಾದಿಗ. ಹೊಲಸು ತಿಂಬುವನೇ ಹೊಲೆಯ. ಕುಲವೇನೋ ಆವಂದಿರ ಕುಲವೇನೋ? ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲ ಸಂಗನ ಶರಣರೇ ಕುಲಜರು' ಎಂದು ಹೇಳಿದರು.

'ವಿಪ್ರ ಮೊದಲಾಗಿ ಅಂತ್ಯಜ ಕಡೆಯಾಗಿ ಶಿವಭಕ್ತರಾದವರನೆಲ್ಲ ಒಂದೇ ಎಂಬೆ' ಎಂದು ಸಾರಿದರು. ಸಾಧಕ ನಾನು, ನನ್ನದು ಎಂಬ ಅಭಿಮಾನವನ್ನು ಪೂರ್ಣವಾಗಿ ಬಹಿಷ್ಕರಿಸಬೇಕು. ಅವನದಾಗಿರುವುದು

ಈಶ್ವರನ ಸೊತ್ತು. ಅದರ ಕಾಪಿನ ಕೆಲಸವಷ್ಟೇ ಸಾಧಕನದು. ಅವನ ಕೈ ಕೊಡುಗೈಯಾಗಿರಬೇಕು. ತೆಗೆದುಕೊಳ್ಳುವ ಕೈಯಾಗಿರಬಾರದು.

'ತೆಗೆದುಕೊಳ್ಳುವುದಕ್ಕಿಂತ ಕೊಡುವುದು ಹೆಚ್ಚು ಶ್ರೇಯಸ್ಕರ' ಎಂದು **ಏಸು** ನುಡಿದಿದ್ದಾನೆ.

'ಬೇಡ ಬಂದ ದೀನನಿಗೆ ನೀಡುವ ದಾತ ಅವನನ್ನು ತನ್ನ ಸತ್ಯ ಗೆಳೆಯನನ್ನಾಗಿ ಮಾಡಿಕೊಳ್ಳುತ್ತಾನೆ' ಎಂದು **ಋಗ್ವೇದ** ಹೇಳಿದೆ.

'ಪ್ರತಿಫಲಾಪೇಕ್ಷೆಯಿಲ್ಲದೆ ಮಾಡುವ ದಾನ ಮಹಾದಾನ' ಎಂದು **ಗೀತೆ** ನುಡಿದಿದೆ.

'ನಿನಗಿಂತಲೂ ದೀನಾವಸ್ಥೆಯಲ್ಲಿರುವವರಿಗೆ ಕನಿಕರ ತೋರಿಸು. ನಿನ್ನ ವಿರೋಧಿಗೂ ಸ್ನೇಹ ನೀಡು' ಎಂದು **ಅಮೆನ್ ಎಮ್ ಅಪ್ಪನ್ ವಾಣಿ.**

"ದಯವಿಲ್ಲದ ಧರ್ಮವಾವುದಯ್ಯ ?
ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ.
ದಯವೇ ಧರ್ಮದ ಮೂಲವಯ್ಯ.
ಕೂಡಲಸಂಗಯ್ಯನಂತಲ್ಲದೊಲ್ಲನಯ್ಯ"

ಮನೆಗೆ ಬಂದವರನ್ನು ಆದರಿಸಬೇಕು. ನನ್ನಿ ನುಡಿಯಬೇಕು, ತನು–ಮನ ಧನಗಳನ್ನು ಗುರುಲಿಂಗ ಜಂಗಮಕ್ಕೆ ಅರ್ಪಿಸಬೇಕು ಎಂದು ಬಸವಣ್ಣನವರು ಹೇಳಿದ್ದಾರೆ. **'ಮಮಾತ್ಮಾ ಸರ್ವಭೂತಾತ್ಮಾ'** ಎಂದು **ಉಪನಿಷತ್ತು** ಸಾರಿತು. 'ಸರ್ವಭೂತಗಳಲ್ಲಿ ಅಡಗಿರುವ ನನ್ನನ್ನು ಅರಿತುಕೋ' ಎಂದು **ಭಗವದ್ಗೀತೆ** ಉಪದೇಶಿಸಿತು.

ಪರಮಾತ್ಮನ ಅನುಸಂಧಾನಕ್ಕೆ ಆತ್ಮಶುದ್ಧಿ ಬೇಕು. ಆತ್ಮಶುದ್ಧಿಯೊಂದಿಗೆ 'ಅಹಂಭಾವ' ತೊಲಗಬೇಕು. ಸರ್ವಸಮತಾಭಾವ ಮೂಡಬೇಕು ಎನ್ನುವ ಮಾತನ್ನು ಎಲ್ಲ ಧರ್ಮಗಳೂ ಒತ್ತಿ ಹೇಳಿವೆ.

ಇವರಲ್ಲಿ ವಿಚಾರ ಎರಡು ಕವಲೊಡೆದ ಹಾಗೆ ಕಂಡುಬರುತ್ತದೆ. ಕೆಲವು ಧರ್ಮಗಳು ಜ್ಞಾನಕ್ಕೆ ಬೆಲೆಕೊಟ್ಟು, ಆ ದಾರಿ ಸರ್ವಶ್ರೇಷ್ಠವೆಂದು ಸಾರಿದವು ; ಕೆಲವು ಧರ್ಮಗಳು ಭಕ್ತಿಗೆ ಪ್ರಾಧಾನ್ಯವನ್ನಿತ್ತವು ; ಕೆಲವು

ಕರ್ಮವೇ ಮುಖ್ಯವೆಂದವು. ಉಪನಿಷತ್ತುಗಳು ಜ್ಞಾನ, ಕರ್ಮ, ಭಕ್ತಿ ಯೋಗಗಳು ಮೂರನ್ನೂ ಪ್ರತಿಪಾದಿಸಿವೆ.

ಅನುಭಾವದ ಮಾರ್ಗ ಹಿಡಿದ ಬಸವಣ್ಣನವರು ಭಕ್ತಿಗೇ ಹೆಚ್ಚು ಪ್ರಾಧಾನ್ಯಕೊಟ್ಟರು. ಭಕ್ತಿಯ ಮಾರ್ಗದಲ್ಲಿ ನಡೆಯುವ ಸಾಧಕ ಋಜು ಜೀವನ ನಡೆಸಬೇಕು.

'ಅಹಿಂಸೆ, ಸತ್ಯ, ಅಸ್ತೇಯ, ಶೌಚ, ಇಂದ್ರಿಯನಿಗ್ರಹ ಇವೇ ಸಂಕ್ಷಿಪ್ತವಾಗಿ ಮಾನವಧರ್ಮವೆನಿಸಿಕೊಳ್ಳುವುದು' ಎಂದು **ಮನು** ಅಭಿಪ್ರಾಯಪಟ್ಟಿದ್ದಾನೆ.

'ಕೊಲ್ಲಬೇಡ, ಸುಳ್ಳುಹೇಳಬೇಡ, ಪರನಿಂದೆ ಮಾಡಬೇಡ, ಉದಾರ ವಾಗಿ ದಾನಮಾಡು, ಮಾದಕ ದ್ರವ್ಯಗಳನ್ನು ದೂರವಿರಿಸು. ಶುದ್ಧ ಮನಸ್ಸು, ಶುದ್ಧ ದೇಹಕ್ಕೆ ಸೋಮಪಾನ ಬೇಕಿಲ್ಲ. ನೆರೆಯವನ ಪತ್ನಿಯನ್ನು ಬಯಸ ಬೇಡ. ವ್ಯಭಿಚಾರ ನಿಷಿದ್ಧ'ವೆಂದು **ಸಮಂತಭದ್ರಾಚಾರ್ಯ** ವಿಧಿಸಿದ್ದಾನೆ. 'ಕೊಲ್ಲಬೇಡ ಸುಳ್ಳು ಸಾಕ್ಷಿನುಡಿಯಬೇಡ, ಕದಿಯಬೇಡ, ವ್ಯಭಿಚಾರಮಾಡ ಬೇಡ, ಪರರ ವಸ್ತುವನ್ನು ಅಪಹರಿಸಬೇಡ!' ಎಂದು **ಮೋಸಸ್** ಸೂಚಿಸಿದ್ದಾನೆ.

'ನ್ಯಾಯನಿರ್ಧಾರಕ್ಕೆ ಬೇಕಾಗುವಲ್ಲಿ ಬಿಟ್ಟು ಉಳಿದಾಗ ಕೊಲೆಮಾಡ ಲಾಗದು. ಅಸತ್ಯ ನುಡಿಯಬಾರದು. ಮಾದಕ ಪದಾರ್ಥಗಳು ಸೈತಾನನ ಸೃಷ್ಟಿ. ಅವುಗಳನ್ನು ದೂರವಿರಿಸಬೇಕು. ಲೈಂಗಿಕ ಸಂಯಮವಾಚರಿಸಿ, ಇಂದ್ರಿಯಗಳನ್ನು ನಿಗ್ರಹಿಸುವವರಿಗೆ ಯಶಸ್ಸು ಸಿಕ್ಕುತ್ತದೆ' ಎಂದು **ಕೊರಾನ್** ಹೇಳಿದೆ.

ಯೇಸು ತನ್ನ ಹತ್ತು ಉಪದೇಶದ ಮಾತುಗಳಲ್ಲಿ ಇವುಗಳನ್ನೇ ಪ್ರತಿಪಾದಿಸಿದ್ದಾನೆ. **ಶ್ರೀ ಕೃಷ್ಣ** ಇಂದ್ರಿಯನಿಗ್ರಹಕ್ಕೆ ಬಹಳ ಮಹತ್ವ ಕೊಟ್ಟು, ಸ್ವೇಚ್ಛಾಚಾರದಿಂದಾಗುವ ಅನರ್ಥವನ್ನು **ಗೀತೆಯಲ್ಲಿ** ಬಿಡಿಸಿ ಹೇಳಿದ್ದಾನೆ.

ಬಸವಣ್ಣನವರು, 'ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ, ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ, ಇದೇ ಅಂತರಂಗಶುದ್ಧಿ, ಇದೇ ಬಹಿರಂಗ ಶುದ್ಧಿ,

ಇದೇ ನಮ್ಮ ಕೂಡಲಸಂಗನನೊಲಿಸುವಪರಿ' ಎಂದು ಹೇಳಿದ್ದಾರೆ. 'ಪರವಧುವನು ಮಹಾದೇವಿಯೆಂಬೆ' ಎಂದು ನುಡಿದು ಲೈಂಗಿಕ ಪಾರಿಶುದ್ಧತೆಗೆ ಪ್ರಾಧಾನ್ಯಕೊಟ್ಟಿದ್ದಾರೆ.

**ವಿಶ್ವಾಚಾರ್ಯರ** ಅನುಭವಕ್ಕೂ, ಉಪದೇಶಕ್ಕೂ, ಬಸವಣ್ಣನವರ ಅನುಭಾವ, ಉಪದೇಶಕ್ಕೂ ಯಾವ ಅಂತರವೂ ಕಂಡುಬರುವುದಿಲ್ಲ. ಪ್ರಾಚೀನರು ನುಡಿದುದನ್ನೇ ಬಸವಣ್ಣನವರೂ ನುಡಿದು ತೃಪ್ತರಾಗಲಿಲ್ಲ. 'ನಡೆನುಡಿ ಒಂದಾಗಿರಬೇಕು' ಎಂಬುದು ಅವರ ಜೀವನದ ನಂದಾದೀಪ.

ಆಧ್ಯಾತ್ಮಿಕ, ನೈತಿಕ, ದಾರ್ಶನಿಕ ತತ್ವಗಳನ್ನು ಬುದ್ಧಿಗೋಚರವಾಗುವಂತೆ ಹೇಳಬಹುದು. ಅದಕ್ಕೆ ಬೇಕಾದುದು ಪಾಂಡಿತ್ಯ. ಆದರೆ ಮಾನವ ಪ್ರಗತಿಗೆ ಪಾಂಡಿತ್ಯವಷ್ಟೇ ಸಾಕೇ? ಆಚರಣೆಯಿಂದ ಪುಟಗೊಳ್ಳದ ಜ್ಞಾನ ಮರಳುಗಾಡಿನ ಮೃಗಜಲ. ಸಾಧಕನ ಆತ್ಮ ಸಂಸ್ಕೃತವಾಗಬೇಕಾದರೆ ಜ್ಞಾನಶುದ್ಧಿಯ ಜತೆಗೆ ಕ್ರಿಯಾಶುದ್ಧಿಯೂ ಆಗಬೇಕು.

ಬಸವಣ್ಣನವರ ವಾಣಿ ಜೀವನದ ಮೂಸೆಯಲ್ಲಿ ಬೆಂದುಬಂದಿರುವ ಅಪರಂಜಿ ಚಿನ್ನ. ಅವರ ಪ್ರತಿಯೊಂದು ನುಡಿಯಲ್ಲಿಯೂ ಅನುಭವದ ಕಿಡಿ ಚಿಮ್ಮುತ್ತದೆ. ಅವರ ಮಾತು ಅನುಗಾಲಕ್ಕೆ ಅನ್ವಯಿಸುವ ಅಮರಗುಣ ಪಡೆದಿದೆ.

ಬಸವಣ್ಣನವರು ಆಧ್ಯಾತ್ಮಿಕ ಸಾಧನೆಗೆ ಒಂದು ಸಂಪ್ರದಾಯದ ಪೌಳಿಗೋಡೆ ಕಟ್ಟಿದ್ದರು. ಅದರೊಳಗೆ ಶೀಲ, ಆಚಾರ, ವಿಚಾರಗಳನ್ನಳವಡಿಸಿ ಸಾಧಕನ ಮನಸ್ಸು ಹಲವು ಕಡೆಗೆ ಹಾಯದಂತೆ ಅದಕ್ಕೆ ಭದ್ರವಾದ ಬುನಾದಿ ಹಾಕಿಕೊಡಲೆತ್ನಿಸಿದರು. ತರುವಾಯ ಬಂದ ಅನುಯಾಯಿಗಳ ಶೀಲ ಆಚಾರಗಳ ಮೇಲಿಂದ ಬಸವಣ್ಣನವರ ಶೀಲ ಆಚಾರಗಳನ್ನಳೆಯುವುದು ಬೇಡ. ಹಿರಿಯರ ಹೊನ್ನುನುಡಿಗೆ ಹೊಲಬುಗೊಡುವ ಕೇಡಿಗರಿಲ್ಲದ ತಾವುಂಟೆ?

ಆಧುನಿಕ ಜೀವನ, ವಿಚಾರ ಬೇರೊಂದು ಬಟ್ಟೆಯನ್ನರಸಿರುವಾಗ ಬಸವಣ್ಣನವರ ಅಥವಾ ಇತರ ಧರ್ಮಸಂಸ್ಥಾಪಕರ, ಉದ್ಧಾರಕರ ವಿಚಾರವಾಹಿನಿಯ, ಬಗ್ಗೆ ಭಿನ್ನಾಭಿಪ್ರಾಯ ಬರುವುದು ಸಹಜ. ಬಸವಣ್ಣನವರು ಶಿವಸಾಕ್ಷಾತ್ಕಾರ ಅದಕ್ಕೆ ಬೇಕಾದ ಅಷ್ಟಾವರಣ, ಪಂಚಾಚಾರಗಳಿಗೆ ಮಹತ್ವ

ಕೊಟ್ಟರು. ಗುರು, ಲಿಂಗ, ಜಂಗಮದ ಪ್ರಾಧಾನ್ಯವನ್ನು ಸಾರಿದರು. ಲಿಂಗ ವಿದ್ದವನನ್ನು ಕುಲಜನೆಂದರು. 'ದುರಾಚಾರಿಯಾಗಿದ್ದರೂ ಲಿಂಗಸಂಗಿ ಯಾಗಿದ್ದರೆ ಅವನನ್ನು ಶರಣನೆಂದು ಪೂಜಿಸುವೆ' ಎಂದರು. ಈ ವಿಚಾರಧಾರೆ ಯಿಂದ **ಗಾಂಧೀಜಿ** ನಮ್ಮನ್ನು ಸ್ವಲ್ಪ ಮುಂದಕ್ಕೆ ಒಯ್ದಿದ್ದಾರೆ. ಮನುಷ್ಯ ಭಕ್ತನಾಗಬೇಕು; ಭಕ್ತ ಶರಣನಾಗಬೇಕು. ಶರಣ ಪರವಸ್ತುವಿನಲ್ಲಿ ಐಕ್ಯನಾಗಬೇಕು ಎನ್ನುವುದನ್ನು ಎಲ್ಲ ಧರ್ಮಗುರುಗಳೂ ಒಪ್ಪಿಕೊಂಡಿದ್ದಾರೆ. ಆದರೆ ನನ್ನ ಮಾರ್ಗದಲ್ಲಿಯೇ ನಡೆಯಬೇಕು. ನನ್ನ ದಾರಿ ಸತ್ಯ, ನಿತ್ಯ; ಉಳಿದುವು ಅಸತ್ಯ. ಅನಿತ್ಯ ಎನ್ನುವ ಅಭಿಮಾನಾತಿರೇಕವೇ ಘರ್ಷಣೆಗೆ ಕಾರಣವನ್ನೊದಗಿಸುತ್ತದೆ. ಈ ಮಾತಿಗೆ ನಿಲುಗಡೆಯಾವುದು? ಘರ್ಷಣೆ ಕೊನೆಗಾಣುವುದೆಂದಿಗೆ? **ಗಾಂಧೀಜಿ** ಹೇಳಿದರು: 'ಎಲ್ಲಧರ್ಮದ, ಮೂಲಭೂತ ತತ್ವ ಒಂದೇ ಎಂದು ಒಪ್ಪಿಕೊಂಡ ಮೇಲೆ ಆಚಾರಕ್ಕೇಕೆ ಬಡಿದಾಡಬೇಕು. ಅವರವರು ಅವರವರಿಗೆ ತೋರಿದ ದಾರಿಯಲ್ಲಿ ಹೋಗಲಿ. ಗುರಿ ಒಂದೇ ಆಗಿದ್ದರೆ ಸಾಕು. ಒಬ್ಬ ಇನ್ನೊಬ್ಬನನ್ನು ಅಲ್ಲಗಳೆಯುವುದು ಬೇಡ!'

ಬಸವಣ್ಣನವರ, ಇತರ ಧರ್ಮ ಗುರುಗಳ ಉಪದೇಶವಾಣಿಗೆ ಗಾಂಧೀಜಿ ತೋರಿರುವ ಬೆಳಕುಚೆಲ್ಲುವುದು ಶ್ರೇಯಸ್ಕರ. ಈ ಬೆಳಕು ಲೋಕವನ್ನು ಸಂಗ್ರಾಮದಿಂದ ಏಕತ್ವಕ್ಕೆ ಒಯ್ಯಬಹುದು.

ಬಸವಣ್ಣನವರ ಗುಣಕಥನಮಾಡಲು ಆಸಕ್ತರಾದ ನಾವು ಅವರ ಉಪದೇಶಾಚರಣೆಗೆ ಮನಸ್ಸು ಕೊಡೋಣ. ಅವರ ನಿತ್ಯಸಂದೇಶ ನಿತ್ಯ ನೂತನವಾಗಿ ನಮ್ಮ ಬಾಳು ಬೆಳಗಿಸಲಿ. ನಮ್ಮನ್ನು ಅಂಧಕಾರದಿಂದ ಬೆಳಕಿಗೆ, ಮೃತ್ಯುವಿಂದ ಅಮೃತತ್ವಕ್ಕೆ ಒಯ್ಯಲಿ.

---

# ೧೨. ಬಸವಣ್ಣನವರು ಸಾಧಿಸಿದ ಸಮಾಜ ಸಂಘಟನೆ

ಆದರ್ಶ ಅಧ್ಯಾತ್ಮಿಕಜೀವನ ನಡಸುವುದು ಸಾಧಕನಿಗೆಷ್ಟು ಮುಖ್ಯವೋ ಅಷ್ಟೇ ಮುಖ್ಯವಾದುದು ಆದರ್ಶ ಲೌಕಿಕಜೀವನ. ಇಹದಲ್ಲಿ ಮನಸ್ಸು ಬಂದಂತೆ ಬಾಳಿ, ಹಲವು ವಿಲೋಭನೆಗಳಿಗೆ ಮನವನೀಡಾಡಿ ಕಾಗೆ ಕೋಳಿ ಗಳಿಗಿಂತ ಕರಕಷ್ಟವಾದ ಬಾಳುವೆ ಮಾಡಿ ಪರಕ್ಕೆ ಹಾರಲೆಳೆಸುವುದು ಹಾಸ್ಯಾಸ್ಪದ. ಸಮ್ಯಕ್‌ದೃಷ್ಟಿಯಿಂದ ನೋಡುವುದಾದರೆ ಇಹ–ಪರವೆಂದು ಭೇದ ಕಲ್ಪಿಸುವುದೇ ತಪ್ಪು. ಇಹ ದೈತ್ಯರ ರಾಜ್ಯ, ಪರ ದೇವತೆಗಳ ಲೋಕವೆಂಬ ಭಾವನೆ ದುರ್ಬಲಹೃದಯದ ಬಯಲುಭ್ರಾಂತಿ. ತನ್ನ ಪರಿಸ್ಥಿತಿಗೆ ಹೊಂದಿಕೊಳ್ಳಲಾರದ ವ್ಯಕ್ತಿ, ಪರಿಸ್ಥಿತಿಯನ್ನೆದುರಿಸಿ ಅದರ ಕಾಳಿಕೆಯನ್ನು ತೊಡೆದು ಸುಭಗತೆಯನ್ನು ಸ್ಥಾಪಿಸಲಾಗದ ವ್ಯಕ್ತಿ ಕಣ್ಣಿಗೆ ಕಾಣದಿರುವ ಲೋಕದ ಸುಖಸಂಪತ್ತನ್ನು ನೆನೆದು ಆತ್ಮವಂಚನೆಮಾಡಿಕೊಳ್ಳುತ್ತಾನೆ. ನಾಳಿನ ಬಾಳು ಸ್ವರ್ಗಸದೃಶವಾಗಿರಬೇಕೆಂದು ಬಯಸುವುದಕ್ಕಿಂತ ಇಂದಿನ ಬಾಳೇ ಸ್ವರ್ಗವಾಗಬೇಕೆಂದು ಬಯಸುವುದು ವಿವೇಕಿಯ ಲಕ್ಷಣ. ಅದಕ್ಕಾಗಿ ತ್ರಿಕರಣ ಪೂರ್ವಕವಾಗಿ ದುಡಿಯುವುದು ಮಾನವನ ಕರ್ತವ್ಯ.

> **"ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿಭೋ.**
> **ಸತ್ಯವ ನುಡಿವುದೇ ದೇವಲೋಕ, ಮಿಥ್ಯವ ನುಡಿವುದೇ ಮರ್ತ್ಯಲೋಕ**
> **ಆಚಾರವೇ ಸ್ವರ್ಗ, ಅನಾಚಾರವೇ ನರಕ."**

ಸತ್ಯದ ನಡೆಯಿಂದ ನುಡಿಯಿಂದ ಮರ್ತ್ಯಲೋಕವನ್ನೇ, ದೇವಲೋಕವನ್ನಾಗಿ ಮಾರ್ಪಡಿಸಬಹುದು; ಮರ್ತ್ಯಲೋಕದ ಮಾನವರು ಮಾನವ ಪುಂಗವರಾಗಬಹುದು.

ಮರ್ತ್ಯ ಮಾಯೆ, ಇದು ಅಸ್ಥಿರ. ಇಲ್ಲಿನ ಬಾಳುವೆ ಜೀವನನ್ನು ಅಧಃಪತನಕ್ಕೆಳೆಯುತ್ತದೆ ಎಂಬ ಪ್ರಸ್ಥಾನವೇ ನಮ್ಮ ವಿಪರೀತ ನಡೆ, ನುಡಿ, ತಿಳುವಳಿಕೆಗೆ ಮೂಲಕಾರಣವಾಗಿದೆ. ಆತ್ಮರತನಾದ ಮುಮುಕ್ಷು ತಾನು

ನಿಂತ ಸ್ಥಳವನ್ನೇ, ಮುಕ್ತಕ್ಷೇತ್ರ ಮಾಡಬಲ್ಲ; ಅವನ ನುಡಿಯೇ ವೇದ. ಅವನಲ್ಲಿ ಅಂತರ್ಗತವಾದ ಜ್ಞಾನಪ್ರಭೆ ನಿರಪೇಕ್ಷವಾಗಿ ತನ್ನ ಬೆಳಕನ್ನು ಎಲ್ಲೆಡೆಯಲ್ಲಿಯೂ ಚಲ್ಲುತ್ತದೆ.

"ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ.
ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯ.
ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ."

ಇಹಪರಗಳಿಗಿದ್ದ ಅಂತರವನ್ನು ಹೋಗಲಾಡಿಸಿ ಮಾನವಜೀವನ ತನ್ನ ಪರಿಪೂರ್ಣತೆಯನ್ನು ಸಾಧಿಸುವುದರ ಕಡೆಗೆ ವಿಶೇಷ ಲಕ್ಷ್ಯಕೊಟ್ಟು ಬಸವಣ್ಣನವರು ಮಹೋಪಕಾರ ಮಾಡಿದ್ದಾರೆ. ಪ್ರಪಂಚದಲ್ಲಿದ್ದೂ ಪ್ರಪಂಚಿಕನಾಗದೆ, ಎಲೆಯಮೇಲಣ ಹಿಮಮಣಿಯಂತೆ ಬಾಳುವೆ ನಡೆಸಬೇಕೆಂದು ಒತ್ತಿಹೇಳಿದ್ದಾರೆ. ಸಂಸಾರವೆಂಬುದೊಂದು ಗಾಳಿಯ ಸೊಡರು. ಸಿರಿಯೆಂಬುದೊಂದು ಸಂತೆಯಮಂದಿ – ಕಾಡಬೆಳದಿಂಗಳು. ಅದನ್ನೇ ಅನನ್ಯವಾಗಿ ನಂಬಿ ಕುಳಿತರೆ ಸೀರ ಒಬ್ಬುಳಿಕೆಗೆ ಕಬ್ಬುನದ ಕಟ್ಟುಕೊಟ್ಟು ,ಸುರಕ್ಷಿತ ಮಾಡಿದಂತಾಗುತ್ತದೆ.

ಪ್ರಾಪಂಚಿಕನಾಗಿರುವ ಮನುಷ್ಯ ತನ್ನ ಕರ್ತವ್ಯಪಾಲನೆಯಲ್ಲಿ ಎಳ್ಳಷ್ಟೂ ಚ್ಯುತಿತಂದುಕೊಳ್ಳಬಾರದು. ಆದರೆ ಕರ್ತವ್ಯಪಾಲನೆ ಅವನ ಉತ್ಕ್ರಾಂತಿಯ ಮಹಾಚಕ್ರದ ಕಡಿಹಲ್ಲುಗಳು, (Spokes) ಮಾತ್ರ. ಭಕ್ತ ಭಗವತ್ ಸಾನಿಧ್ಯಕ್ಕೆ ಹೋಗುವುದಕ್ಕೆ ಇವು ಎಷ್ಟರಮಟ್ಟಿಗೆ ನೆರವಾಗುತ್ತವೆ ಎಂದು ಅವನು ವಿಚಾರಮಾಡಬೇಕು. ಇಹಬಾಳುನೆಯ ಅನಿತ್ಯತೆಯನ್ನರಿತು ಕೊಂಡೇ ಭಕ್ತ ಕರ್ತವ್ಯಮುಖನಾಗಬೇಕು.

"ವ್ಯಾಧನೊಂದು ಮೊಲನತಂದರೆ, ಸಲುವ ಹಾಗಕ್ಕೆ ಬೆಲೆವರಯ್ಯ.
ನೆಲನಾಳ್ವನ ಹೆಣನೆಂದರೆ, ಒಂದಡಿಕೆಗೆ ಕೊಂಬವರಿಲ್ಲ ನೋಡಯ್ಯ.
ಮೊಲನಿಂದ ಕರಕಷ್ಟ ನರನ ಬಾಳುವೆ."

ಭಗವಂತನಲ್ಲಿ ಅಚ್ಚಳಿಯದ ಭಕ್ತಿಯನ್ನಿಟ್ಟುಕೊಂಡು ತನ್ನ ಜೀವನ

ವನ್ನೇ ಭಗವಂತನ ಪೂಜೆಯಾಗಿ ಭಕ್ತ ಮಾರ್ಪಡಿಸಬೇಕು. ಭಗವಂತನ ಪೂಜೆಗೆ ಕಾಲ, ದೇಶ, ವರ್ತಮಾನಗಳ ಇತಿಮಿತಿಯಿಲ್ಲ.

"ನೆರೆಕೆನ್ನೆಗೆ, ತೆರೆಗಲ್ಲಕ್ಕೆ, ಶರೀರ ಗೂಡುವೋಗದ ಮುನ್ನ,
ಹಲ್ಲುಹೋಗಿ, ಬೆನ್ನುಬಾಗಿ, ಅನ್ಯರಿಗೆ ಹಂಗಾಗದ ಮುನ್ನ,
ಕಾಲಮೇಲೆ ಕೈಯನೂರಿ, ಕೋಲ ಹಿಡಿಯದಮುನ್ನ,
ಮುಪ್ಪಿಂದೊಪ್ಪವಳಿಯದ ಮುನ್ನ,
ಮೃತ್ಯು ಮುಟ್ಟದ ಮುನ್ನ,
ಪೂಜಿಸು ಕೂಡಲ ಸಂಗಮದೇವನ."

ಅಧ್ಯಾತ್ಮಿಕ ಸಾಧನೆ, ವೈಯಕ್ತಿಕ ವಿಷಯವಾಯಿತು. ಸಾಧಕ ತನ್ನ ಮಹಾತಪಸ್ಸಿನಿಂದ ಆತ್ಮಕಲ್ಯಾಣವನ್ನು ಸಾಧಿಸುವುದರ ಜತೆಗೆ ಸಮಷ್ಟಿಯ ಕಲ್ಯಾಣವನ್ನೂ ಸಾಧಿಸಬೇಕು. ತಾನೊಬ್ಬ ವಿಮುಕ್ತಜೀವಿಯಾದರೆ ಸಾಲದು; ಜಗತ್ತೇ ಮುಕ್ತಿಮಾರ್ಗದಲ್ಲಿ ನಡೆಯಬೇಕು.

ಬಸವಣ್ಣನವರ ಆಧ್ಯಾತ್ಮಿಕ ಸಾಧನೆಯಷ್ಟೇ ಮಹತ್ತ್ವವಾದುದು ಅವರು ರೂಪಿಸಲೆಳಸಿದ ಸಮಾಜ. ಸಮಾಜ ಸುಸ್ಥಿರವೂ ಸುಭದ್ರವೂ ಆಗಿರಬೇಕಾದರೆ ಅದು ಜ್ಞಾನ, ಸಮಾನತೆ, ಅಂತಃಕರಣದ ಅಸ್ತಿಭಾರ ಪಡೆದಿರಬೇಕು. ಲೋಕದಲ್ಲಿರುವ ಪ್ರತಿಯೊಬ್ಬ ವ್ಯಕ್ತಿಗೂ ಬಾಳುವ ಬದುಕುವ ಅಧಿಕಾರವಿದೆ; ಅವನ ಹುಟ್ಟು ಪ್ರಧಾನವಾದುದಲ್ಲ – ಗುಣಪ್ರಧಾನವಾದುದು. ಭಗವಂತನ ಕಣ್ಣುಮುಂದೆ ಸಮಸ್ತ ಜೀವಕೋಟಿಯೂ ಒಂದೇ – ನಾನು ಹೆಚ್ಚು ತಾನು ಹೆಚ್ಚು ಎಂದು ಗಳಹುವುದು ಸಲ್ಲದು ಎಂದು ಬಸವಣ್ಣನವರು ಎಚ್ಚರಿಸಿದರು. ಹೊಲೆಯನಾಗಲಿ, ಹಾರವನಾಗಲಿ ಅವನು ಶಿವಭಕ್ತನಾಗಿದ್ದಲ್ಲಿ – ಪರಮಪೂಜ್ಯನಾಗುತ್ತಾನೆ.

"ಆವ ಕುಲವಾದರೇನು? ಶಿವಲಿಂಗವಿದ್ದವನೇ ಕುಲಜನು.
ಶಿವೇಜಾತ ಕುಲೇಧರ್ಮ ಪೂರ್ವಜನ್ಮ ವಿವರ್ಜಿತಂ
ಕುಲವನರಸುವರೆ ಶರಣರಲ್ಲಿ ಜಾತಿಸಂಕರವಾದ ಬಳಿಕ.
ಉಮಾಮಾತಾ ಪಿತಾರುದ್ರ ಈಶ್ವರ ಕುಲಮೇವಚ ಎಂದುದಾಗಿ,

ಒಕ್ಕುದಕೊಂಬೆನವರಲ್ಲಿ ಕೂಸಕೊಡುವೆ,
ಕೂಡಲ ಸಂಗಮದೇವ, ನಂಬುವೆ ನಿಮ್ಮ ಶರಣರನು."

ಜಾತಿಮತಗಳ ಹಿರಿಮೆ ಹುಟ್ಟಿನಿಂದಾಗುವುದಿಲ್ಲ, ಗುಣದಿಂದಾಗುತ್ತದೆ. ಉತ್ತಮಕುಲದಲ್ಲಿ ಹುಟ್ಟಿ, ಹೀನ ಆಚಾರ ವಿಚಾರ ಪ್ರವೃತ್ತನಾಗಿರುವವನನ್ನು ಹೀನನೆಂದೇ ಭಾವಿಸಬೇಕು; ಹೀನಕುಲದಲ್ಲಿ ಹುಟ್ಟಿ ಉತ್ತಮ ಆಚಾರ ವಿಚಾರ ಪ್ರವೃತ್ತನಾಗಿರುವವನನ್ನು ಉತ್ತಮನೆಂದೇ ಭಾವಿಸಬೇಕು.

"ಕೊಲ್ಲುವವನೇ ಮಾದಿಗ, ಹೊಲಸುತಿಂಬವನೆ ಹೊಲೆಯ
ಕುಲವೇನೋ ಆವಂದಿರ ಕುಲವೇನೋ?
ಸಕಲಜೀವಾತ್ಮರಿಗೆ ಲೇಸನೆ ಬಯಸುವ ನಮ್ಮ
ಕೂಡಲಸಂಗನ ಶರಣರೇ ಕುಲಜರು."

ದೇಹವೇ ಹೊಲೆಮನೆಯಾಗಿರುವಾಗ ಹೊಲೆತನವನ್ನು ಬೇರೆಯೆಡೆ ಅರಸುವುದೇತಕ್ಕೆ? ಮೊದಲು ತನ್ನ ಹೊಲೆತನವನ್ನು ಮಾಣಿಸಬೇಕು.

ವ್ಯಕ್ತಿ ತನ್ನ ಮಾತಿನಲ್ಲಿ ಮಾಧುರ್ಯ ತಂದುಕೊಂಡು, ನಡತೆಯಲ್ಲಿ ಶೀಲತುಂಬಿಕೊಂಡು, ಸದ್ಕ್ರಿಯೆ, ಸದಾಚಾರ ಸಂಪನ್ನನಾಗಬೇಕು. ಎಲ್ಲರೂ ಹೀಗೆ ವರ್ತಿಸಿದರೆ ಅಲ್ಲಿರುವ ಕೈಲಾಸ ಇಲ್ಲಿಯೇ ಇರುತ್ತದೆ.

"ಕುಲಮದವಳಿಯದನ್ನಕ್ಕ ಶರಣನಾಗಲೇಕೆ?
ವಿಧಿವಶಬಿಡದನ್ನಕ್ಕ ಭಕ್ತನಾಗಲೇಕೆ?
ಹಮ್ಮಿನ, ಸೊಮ್ಮಿನ ಸಂಬಂಧ ಬಿಟ್ಟು ಕಿಂಕರರ ಕಿಂಕರನಾಗಬೇಕು.
ಹೆಪ್ಪನೆರೆದ ಹಾಲುಕೆಟ್ಟು ತುಪ್ಪವಪ್ಪಂತೆ.
ಇಪ್ಪರು ಕೂಡಲ ಸಂಗಮದೇವ, ನಿಮ್ಮ ಶರಣರು."

"ನೆಲನೊಂದೇ ಹೊಲಗೇರಿ ಶಿವಾಲಯಕ್ಕೆ,
ಜಲವೊಂದೇ ಶೌಚಾಚಮನಕ್ಕೆ.
ಕುಲವೊಂದೇ ತನ್ನ ತಾನರಿದಂಗೆ.
ಫಲವೊಂದೇ ಷಡುದರ್ಶನ ಮುಕ್ತಿಗೆ.
ನಿಲವು ಒಂದೇ ಕೂಡಲಸಂಗಮದೇವಾ ನಿಮ್ಮನರಿದಂಗೆ."

ಈಶ್ವರನ ಇರುವನ್ನು ಅರಿಯುವ ಮೊದಲು ಭಕ್ತ ತನ್ನನ್ನು ತಾನರಿತು ಕೊಳ್ಳಬೇಕು. 'ಏನನಾದರೆಯೂ ಸಾಧಿಸಬಹುದು, ಮತ್ತೇನನಾದರೆಯೂ ಸಾಧಿಸಬಹುದು. ತಾನಾರೆಂಬುದ ಸಾಧಿಸಬಾರದಯ್ಯ, ಕೂಡಲಸಂಗಮ ದೇವರ ಕರುಣವುಳ್ಳವಂಗಲ್ಲದೆ' ಎಂದು ಬಸವಣ್ಣನವರು ಅದರ ಕಷ್ಟಸಾಧ್ಯತೆ ಯನ್ನು ಸೂಚಿಸುತ್ತಾರೆ. ಆತ್ಮಜ್ಞಾನಿ ಬರುವುದು ಒಂದೇ ನಿರ್ಧಾರಕ್ಕೆ.

"ಹುತ್ತಕ್ಕೆ ಏಸು ಬಾಯಾದಡೇನು?
ಸರ್ಪನಿಪ್ಪುದು ಒಂದೇ ಸ್ಥಾನ.
ಆ ಭಾವ ಭಾವಿಸಲು ನಿರ್ಭಾವ ಕೂಡಲಸಂಗಮದೇವ."

ಸಮಾಜವನ್ನು, ಲೋಕವನ್ನು ಆತ್ಮಜ್ಞಾನಿಗಳ – ವೀರಶೈವ ಪಾರಿಭಾಷೆ ಯಲ್ಲಿ ಹೇಳಬೇಕಾದರೆ ಶರಣರ – ಅನುಭವಮಂಟಪವನ್ನಾಗಿ ಮಾಡ ಬೇಕೆಂದು ಬಸವಣ್ಣನವರ ಆಕಾಂಕ್ಷೆಯಾಗಿತ್ತು. ಜಗತ್ತನ್ನು ಮಾನವತ್ವದ ಮಹಾಮನೆಯೆಂದು ಭಾವಿಸಿ, ಘೋಷಿಸಿ ಬಸವಣ್ಣನವರು ಕೈಕಟ್ಟಿಕೂಡಲಿಲ್ಲ. ಅದನ್ನು ಸಾಧಿಸಲು ತ್ರಿಕರಣಪೂರ್ವಕವಾಗಿ ಶ್ರಮಿಸಿದರು. ತಮ್ಮ ರಾಜ್ಯದಲ್ಲಿ ನಿರುದ್ಯೋಗಿ ಇರಬಾರದು, ಶೋಷಕ ಇರಬಾರದು. ಪ್ರತಿಯೊಬ್ಬನೂ ತನ್ನ ಉದರಂಭರಣಕ್ಕೆ ದುಡಿಯಬೇಕು. ದುಡಿದು ತಿನ್ನುವುದರಲ್ಲಿರುವ ಸೌಖ್ಯ ದುಡಿಸಿಕೊಂಡು ತಿನ್ನುವುದರಲ್ಲಿರುವುದಿಲ್ಲ. ದುಡಿಮೆ ಕೂಡ ಪರರಿಗೆ ಅಹಿತ ವಾಗದ ರೀತಿಯಲ್ಲಿರಬೇಕೆನ್ನುವುದು ಬಸವಣ್ಣನವರ ವಾದವಾಗಿತ್ತು.

ಬಸವಣ್ಣನವರು ತಮ್ಮ ಚಿತ್ತಭಿತ್ತಿಯ ಮೇಲೆ ರೂಪಿಸಿದ ಇಂಥ ಸಮಾಜ ನಿರ್ಮಿತವಾಗಿದ್ದರೆ ಜಗತ್ತಿಗೆ ಒಂದು ಭವ್ಯಾದರ್ಶವನ್ನು ತೋರು ತ್ತಿತ್ತೆನ್ನುವುದರಲ್ಲಿ. ಸಂದೇಹವಿಲ್ಲ. ಕಣಸು ಕೇವಲ ಕನಸಾಯಿತು. ತಮ್ಮ ಆದರ್ಶವನ್ನು ಅರ್ಥಮಾಡಿಕೊಳ್ಳದ ತಮ್ಮ ಅನುಯಾಯಿಗಳೇ ಅದನ್ನು ದುರುಪಯೋಗಪಡಿಸಿದ್ದನ್ನು ಬಸವಣ್ಣನವರು ಕಂಡು ಬೇಸತ್ತರು. ಸುಸಂಘಟನೆಗಾಗಿ ಅವರು ರೂಪಿಸಿದ ಸಮಾಜ ಪರಪೀಡನೆಗೆ ಮನತೆತ್ತಿತು. ಕಲ್ಯಾಣದ ಮಹಾಕ್ರಾಂತಿಯ ಪರಿಣಾಮವಾಗಿ ಹರಿದ ರಕ್ತದ ಹೊಳೆ ಬಸವಣ್ಣನವರ ಕರುಣಾದ್ರ್ರಚಿತ್ತವನ್ನು ನುಚ್ಚುನೂರುಮಾಡಿತು.

ಬಸವಣ್ಣನವರ ನೊಂದಮನಸ್ಸು ನುಡಿಯಿತು:

"ಒಲೆಹತ್ತಿ ಉರಿದೊಡೆ ನಿಲ್ಲಬಹುದಲ್ಲದೆ
ಧರೆಹತ್ತಿ ಉರಿದಡೆ ನಿಲ್ಲಬಹುದೇ ?
ಏರಿ ನೀರುಂಬಡೆ, ಬೇಲಿ ಕಾಯಿ ಮೇವಡೆ
ನಾರಿ ತನ್ನ ಮನೆಯಲ್ಲಿ ಕಳವಡೆ
ತಾಯಿ ಮೊಲೆವಾಲು ನಂಜಾಗಿ ಕೊಲುವಡೆ,
ಇನ್ನಾರಿಗೆ ದೂರುವೆ ಕೂಡಲಸಂಗಮದೇವಾ.''

ಶಿವದೀಕ್ಷೆ ಪಡೆದಮೇಲೂ ತಮ್ಮ ಮಾಯಾಮಲಗಳನ್ನು ತ್ಯಜಿಸದೆ ಈಷಣತ್ರಯಗಳನ್ನು ನಿರಾಕರಿಸದೆ ದೀಕ್ಷಾಸ್ಥಿತಿಯನ್ನು ದುರುಪಯೋಗ ಪಡಿಸುತ್ತಿದ್ದವರನ್ನು ಕಂಡು ಬಸವಣ್ಣನವರು ಸಿಡಿಮಿಡಿಗೊಂಡರು.

"ಸಗಣಿಯ ಬೆನಕಂಗೆ ಸಂಪಿಗೆಯರಳಿನಲ್ಲಿ ಪೂಜಿಸಿದರೆ
ರಂಜನೆಯಲ್ಲದೆ, ಅದರ ಗಂಜಳ ಬಿಡದಣ್ಣಾ.
ಮಣ್ಣಪುತ್ಥಳಿಯ ಮಾಣದೆ ಜಲದಲ್ಲಿ ತೊಳೆದರೆ .
ನಿಚ್ಚ ಕೆಸರಲ್ಲದೆ ಅದರ ಅಚ್ಚುಗ ಬಿಡದಣ್ಣಾ.
ಲೋಕದ ಮಾನವಂಗೆ ಶಿವದೀಕ್ಷೆಗೊಟ್ಟರೆ
ಕೆಟ್ಟವನೇಕೆ ಸದ್ಭಕ್ತನಹನು ಕೂಡಲ ಸಂಗಮದೇವಾ.''

"ಒಳಗೆ ಕುಟಿಲ, ಹೊರಗೆ ವಿನಯವಾಗಿ
ಭಕ್ತರೆನಿಸಿಕೊಂಬವರ ಒಲ್ಲನೊಲ್ಲನಯ್ಯ ಲಿಂಗವು.
ಅವರು ಪಥಕ್ಕೆ ಸಲ್ಲರು, ಸಲ್ಲರಯ್ಯಾ. ಒಳಹೊರಗೊಂದಾಗದವರಿಗೆ
ಅಳಿಯಾಸೆದೋರಿ, ಬೀಸಾಡುವನವರ ಕೂಡಲಸಂಗಮದೇವಾ.''

"ಕಬ್ಬುನದ ಕೋಡಗವ ಪರುಷಮುಟ್ಟಲು,
ಹೊನ್ನಾದರೇನು, ಮತ್ತೇನಾದರೇನು
ತನ್ನ ಮುನ್ನಿನ ರೂಹಬಿಡದನ್ನಕ್ಕ,
ಕೂಡಲ ಸಂಗಮದೇವಾ, ನಿಮ್ಮ ನಂಬಿಯೂ
ನಂಬದ ಡಂಭಕರಿಗಯ್ಯಾ ?''

ಹೊರಗಿನ ಲಾಂಛನಕ್ಕಿಂತಲೂ ಹಿರಿದಾದುದು ಅಂತರಂಗಶುದ್ಧಿ ಅಂತರಂಗಶುದ್ಧಿಯಿಲ್ಲದ ಅಲಂಕಾರ, ಹೆಂಡದ ಮಡಿಕೆಯ ಸಿಂಗರಿಸಿದಂತೆ

ಎಂದು ಬಸವಣ್ಣನವರು ನುಡಿದು ಬಾಳ್ವೆಯ ಋಜುತ್ವದ ಕಡೆಗೆ ಎಲ್ಲರ ಲಕ್ಷ್ಯ ಸೆಳೆದರು. ಬಸವಣ್ಣನವರ ಅನುಯಾಯಿಗಳು, ಸಮಕಾಲೀನರೇ ಅವರ ಉಪದೇಶವನ್ನು ಅರ್ಥಮಾಡಿಕೊಳ್ಳಲು ಸಮರ್ಥರಾಗಲಿಲ್ಲ. ಬಸವಣ್ಣನವರು ಕಟ್ಟಿದ ಸರ್ವಸಮತೆಯ ಮಹಾಮನೆ ಅವರ ಕಣ್ಣಮುಂದೆಯೇ ಕುಸಿದು ಬಿತ್ತು. ತರುವಾಯದವರು ಅವರ ಉಪದೇಶಕ್ಕೆ ಮತ್ತಷ್ಟು ಸಂಕುಚಿತಾರ್ಥ ಕಲ್ಪಿಸಿ, ಬಸವಣ್ಣನವರ ಮತವನ್ನು ಒಂದು ಜಾತಿಯ ಕತ್ತಲೆ ಕೋಣೆಯಲ್ಲಿ ಸೆರೆಹಾಕಿದರು.

ಬಸವಣ್ಣನವರ ಉಪದೇಶ ಕೇವಲ ಸಮಕಾಲೀನವಾಗಿದ್ದರೆ, ಕೇವಲ ಅಂದಿನ ಪರಿಸ್ಥಿತಿಯನ್ನು ಸುಧಾರಿಸುವ ಉದ್ದೇಶವನ್ನು ಪಡೆದುದಾಗಿದ್ದರೆ ಅದು ಇಂದಿನವರೆಗೆ ಜೀವಂತವಾಗಿ ಉಳಿಯುತ್ತಿರಲಿಲ್ಲ. ಅವರ ಉಪದೇಶಕ್ಕೆ ಪರಂಪರೆಯ ಬೆಂಬಲವೂ ಇದೆ. ಉಪನಿಷತ್ತಿನ ತತ್ತ್ವಾರ್ಥವನ್ನು ಆಚರಣೆಯಲ್ಲಿ ತರುವ ಮಹಾಸಾಹಸವನ್ನು ಬಸವಣ್ಣನವರೆಸಗಿದರು. ಅಂದು ಸಜೀವವಾಗಿದ್ದ ಉಪದೇಶ ಇಂದಿಗೂ ಸಜೀವವಾಗಿ ಉಳಿದಿದೆ.

ಧರ್ಮ ಹಾಗೂ ಲೌಕಿಕ ಜೀವನಗಳೆರಡರಲ್ಲಿಯೂ ಸಾಮ್ಯವಾದವನ್ನು ಸ್ಥಾಪಿಸುವ ಬಸವಣ್ಣನವರ ಪ್ರಯತ್ನ ಇಂದು ಪೂತು ಫಲಿಸುತ್ತಿರುವುದನ್ನು ನಾವು ನೋಡಬಹುದು. ಅವರು ನೆಟ್ಟ ಸಸಿ ಅವರ ನಿರೀಕ್ಷಣೆಗಿಂತಲೂ, ಅಧಿಕವಾಗಿ ಬೆಳೆದು ಹೆಮ್ಮರವಾಗುತ್ತಿರುವುದು ಕಂಡು ಬರುತ್ತದೆ. 'ಲಿಂಗ ಭಕ್ತನಾದರೆ ಸಾಕು. ಅವನನ್ನು ಕುಲಜನೆಂದು ಭಾವಿಸುತ್ತೇನೆ. ಶರಣನೆಂದು ಪೂಜಿಸುತ್ತೇನೆ.' ಎನ್ನುವ ಮಾತು ಹನ್ನೆರಡನೆಯ ಶತಮಾನಕ್ಕೆ ಸಾಕಾಗಿತ್ತು. **'ಯಾವ ಮತದವನಾದರೇನು, ಯಾವ ದೇಶದವನಾದರೇನು – ಯಾವ ಲಾಂಛನಧಾರಿಯಾದರೇನು – ಸಮ್ಯಜ್ಞಾನಿಯಾಗಿ, ಸದ್ಕ್ರಿಯಾವಂತನಾಗಿ, ಸಚ್ಚರಿತ್ರನಾದವನನ್ನು ನಾನು ಶರಣನೆಂದು, ಗುರುವೆಂದು ಪೀರನೆಂದು ಪೂಜಿಸುತ್ತೇನೆ.'** ಎನ್ನುವ ಪ್ರಾಗತಿಕ ಮನೋಭಾವದೆಡೆಗೆ ಇಂದಿನ ಜಗತ್ತು ಧಾವಿಸುತ್ತಿದೆ.

ಇಪ್ಪತ್ತನೆಯ ಶತಮಾನದಲ್ಲಿ ಸರ್ವರ ಮನೋಭಿತ್ತಿಯ ಮೇಲೆ ಮೂಡಿರುವ ವಿಶ್ವಕೌಟುಂಬಿಕ ಭಾವನೆ ಇಂದೇ ಹುಟ್ಟಿಬೆಳೆದುದಲ್ಲ. ಇದಕ್ಕೆ ಕಾಲಕಾಲಕ್ಕೆ ಹಲವು ಮಹನೀಯರ ಸೇವೆ, ಪೋಷಣೆ, ತ್ಯಾಗ ಲಭಿಸಿದೆ.

ಅನೇಕ ಸಹಸ್ರವರ್ಷಗಳಿಂದ ಬೆಳೆದು ಬಂದ ವಿಚಾರಧಾರೆ ಇಂದು ಕಳಿತಿದೆ. ಈ ವಿಚಾರಧಾರೆಯ ಪ್ರಾಗಲ್ಭ್ಯಕ್ಕೆ ಬಸವಣ್ಣನವರು ಬಹುಮುಖ ಸೇವೆಯನ್ನು ರ್ಪಿಸಿದ್ದಾರೆ. ಅವರ ನಿಷ್ಕಳಂಕ ಜೀವನ, ನಿರ್ಹೇತುಕ ಸಾಧನಯೋಗ ಅವರ ಅನುಯಾಯಿಗಳಿಗೆ ಮಾತ್ರವೇ ಅಲ್ಲ, ಎಲ್ಲಾ ಲೋಗರಿಗೂ ಮಾರ್ಗ ದರ್ಶಿಗಳಾಗಿದೆ. ಉದಾರದೃಷ್ಟಿಗೆ ಅನುಗುಣವಾದ ಉದಾತ್ತಜೀವನ ನಡೆಸಿ ನಡೆ, ನುಡಿಗಳ ಮಹಾಮೇಳವನ್ನು ಸಾಧಿಸಿ ಬಸವಣ್ಣನವರು ಜಗತ್ತಿನ ಎಲ್ಲಾ ಮುಮುಕ್ಷುಗಳಿಗೂ ಪ್ರಿಯರಾಗಿದ್ದಾರೆ.

ಅವರು ಕಟ್ಟಲೆಳಸಿದ ಆದರ್ಶ ಸಮಾಜನಿರ್ಮಾಣದ ಕಡೆಗೆ ಅವರ ಅನುಯಾಯಿಗಳು ಲಕ್ಷ್ಯಕೊಡಬೇಕು; ಅವರ ಅನುಯಾಯಿಗಳಲ್ಲದವರೂ ಲಕ್ಷ್ಯಕೊಡಬೇಕು. ಯಾರು ಯಾವದಾರಿ ಹಿಡಿದುಹೋದರೂ ಮುಟ್ಟುವುದು ಒಂದೇ ಗುರಿಯನ್ನಲ್ಲವೇ? ಸರ್ವಜ್ಞ ಹೇಳಿದಂತೆ

**'ಊರಿಂಗೆ ದಾರಿಯನು ಯಾರು ತೋರಿದೊಡೇನು.'**



# ೧೩. ಜನಪದಕವಿ ಸರ್ವಜ್ಞ

ಜನಪದಕವಿ ಎನ್ನುವ ವಿಶೇಷಣ ಸರ್ವಜ್ಞನಿಗೆ ಒಪ್ಪುವಷ್ಟು ಬೇರೆ ಯಾವ ಕನ್ನಡಕವಿಗೂ ಒಪ್ಪುವುದಿಲ್ಲ. ಕನ್ನಡ ಕಾವ್ಯಗಣದಲ್ಲಿ ಇವನ ಸಂಪ್ರದಾಯ ಅನುಸರಿಸಿದವರು ಯಾರೂ ಕಂಡು ಬರುತ್ತಿಲ್ಲ. ಪಂಪ – ರನ್ನ, ನಾಗಚಂದ್ರ – ಜನ್ನ, ಹರಿಹರ – ರಾಘವಾಂಕ, ರತ್ನಾಕರವರ್ಣಿ – ನಯಸೇನ, ಚಾಮರಸ – ಕುಮಾರವ್ಯಾಸ ಎಂದು ನಾವು ಜತೆಯಲ್ಲಿ ಹೆಸರಿಸ ಬಹುದಾಗುವಂತೆ ಸರ್ವಜ್ಞನ ಹೆಸರಿನ ಜತೆಗೆ ಯಾರ ಹೆಸರನ್ನೂ ಸೇರಿಸಲು ಸಾಧ್ಯವಿಲ್ಲ. ಸರ್ವಜ್ಞ ಕನ್ನಡ ಕವಿಗಳಲ್ಲಿ ಏಕಮೇವಾವದ್ವಿತೀಯನಾಗಿ ದ್ದಾನೆ. ಹಿಂಡನಗಲಿದ ಗಜದಂತೆ ಅವನು ಹೋದಮಾರ್ಗ ಅವನ ಮಾರ್ಗವಾಗಿದೆ. ತನ್ನ ಕಾವ್ಯಕ್ಕೆ ಅವನು ಅಳವಡಿಸಿಕೊಂಡಿರುವ ರೀತಿ, ನೀತಿ, ಜಾಣು ಎಲ್ಲವೂ ಒಂದು ವಿಶಿಷ್ಟ – ವಿಚಿತ್ರ ಸೊಬಗಿನಿಂದ ಕೂಡಿದೆ.

ಸರ್ವಜ್ಞನ ಕಾವ್ಯದೀಧಿತಿಗೆ ಜೀವನವನ್ನು ಅವನು ನೋಡಿರುವ ರೀತಿಗೆ ಅವನ ಹುಟ್ಟೇ ಕಾರಣವಾಗಿರಬಹುದು. ತಂದೆ ವಿಪ್ರ, ತಾಯಿ ಕುಂಬಾರಗಿತ್ತಿ. ವಿಶ್ವೇಶ್ವರನ ದರ್ಶನ ಮಾಡಿಕೊಂಡು ಬರುತಿದ್ದ ವಿಪ್ರ, ಕುಂಬಾರರ ಮನೆ ಯೊಂದರಲ್ಲಿ ತಂಗಬೇಕಾಗುತ್ತದೆ. ಆ ಸಮಯದಲ್ಲಿ ಮನೆಯ ಮಗಳಾದ ಮಾಳಿಗೂ ಅವನಿಗೂ ವಿಶ್ವಾಸ ಬೆಳೆಯುತ್ತದೆ. ಈ ವಿಶ್ವಾಸದ ಫಲವೇ ನಮ್ಮ ಕವಿ ಸರ್ವಜ್ಞ. ಇವನ ಉದ್ಧಟತನಕ್ಕೆ ಕೆರಳಿ ಮನೆಯವರು ಇವನನ್ನು ಹೊರಗೆ ನೂಕಿರಬೇಕು. ತನ್ನವರ ಮೇಲೆ ಕೆರಳಿದ ಸರ್ವಜ್ಞ ತಾನು ಮಾನವರಿಗೆ ಜನಿಸಿದವನೇ ಅಲ್ಲ, ಚಂದ್ರಶೇಖರನ ವರದಿಂದ ಪುಟ್ಟಿದಾ ಕಂದ ಎಂದು ಹೇಳಿದ್ದಾನೆ.

ತಾಯಿಯ ಮೇಲೆ ಸರ್ವಜ್ಞನಿಗೆ ಬಹಳಕೋಪ ಬಂದಿರಬೇಕು,

**"ತಾ, ಎಂದೆನಲ್ಲದೆ ತಾಯಿ ನಾನೆಂದೆನೇ?**
**ತಾಯಿಯೆಂದಾನು ನುಡಿದೇನು ಪರಸ್ತ್ರೀಯು**
**ತಾಯಿಯೆಂದೆಂಬೆ! ಸರ್ವಜ್ಞ"**

ತನ್ನ ಹುಟ್ಟನ್ನು – ಕುಲಹೀನತೆಯನ್ನು ಎತ್ತಿ ಆಡಿದವರಿಗೆ ಸರ್ವಜ್ಞ ಹೇಳಿದ್ದಾನೆ.

''ಕುಲಗೆಟ್ಟವರು ಚಿಂತೆಯೊಳಗಿರ್ಪರಂತಲ್ಲ
ಕುಲಗೆಟ್ಟು ಶಿವನ ಮರೆಹೊಕ್ಕ ಋಷಿಗಳು
ಕುಲವಾದರಯ್ಯ ಸರ್ವಜ್ಞ''

ಮನೆಯಿಲ್ಲ, ಮಠವಿಲ್ಲ, ಕುಲವಿಲ್ಲ, ವಿದ್ಯೆಯಿಲ್ಲ, ಹೇಳಿಕೊಳ್ಳುವುದಕ್ಕೆ ತಂದೆತಾಯಿಗಳ ಹೆಸರಿನ ಬೆಂಬಲವೂ ಇಲ್ಲ– ಈ ಸ್ಥಿತಿಯಲ್ಲಿ ಸರ್ವಜ್ಞ ವಿಶ್ವದ ವಿದ್ಯಾನಿಲಯಕ್ಕೆ ಕಾಲಿಡುತ್ತಾನೆ. ಸರ್ವಜ್ಞನ ಕಾವ್ಯದ ಋಜುತ್ವಕ್ಕೆ ಅವನ ಹುಟ್ಟು ಹಾಗೂ ಅವನ ಜೀವನ ಸ್ಥಿತಿ ಎರಡೂ ಕಾರಣಗಳಾಗಿರಬೇಕು. ಅವನ ಕಾವ್ಯದಲ್ಲಿ ಬರುವ ಸ್ವತಂತ್ರ ವಿಚಾರ, ಅಸ್ಪೃಶ್ಯ ಆತ್ಮಾಭಿಮಾನ, ಗಂಡೆದೆ, ಬಹಳ ನೋವಿನಿಂದ, ವೇದನೆಯಿಂದ ಗಟ್ಟಿಯಾದ ಮನಸ್ಸಿನ ಸ್ಥಿತಿಯನ್ನು ತೋರುತ್ತದೆ. ತಂದೆಯ ಪರಂಪರಾಗತ ಧರ್ಮಶ್ರದ್ಧೆ, ಧರ್ಮಜ್ಞಾನದ ಜತೆಗೆ ತಾಯಿಯ ನಿಸರ್ಗಜನ್ಯ ವಿಚಾರಪರತೆ, ಮನೋದಾರ್ಢ್ಯ ಹಾಸುಹೊಕ್ಕಾಗಿ ಬೆರೆತುಕೊಂಡಿವೆ. ಈ ರಸಸಮ್ಮಿಳನವೇ ಅವನ ವಿಚಾರವಾದ, ಕೌತುಕವಾದಗಳ ರಹಸ್ಯವಾಗಿದೆ.

ಜೀವನದ ಯಾತ್ರಾರ್ಥಿಯಾಗಿ ಎಳೆವಯಸ್ಸಿನಲ್ಲಿಯೇ ಹೊರಟ ಸರ್ವಜ್ಞ ಅನುಭವದ ಶಾಲೆಯಲ್ಲಿ ತನ್ನ ಶಿಕ್ಷಣಪಡೆಯುತ್ತಾ ಬಂದ. ಅವನು ಯಾವ ಗುರುವಿನಲ್ಲಿಯೂ ನಿಂತು ವಿದ್ಯೆಕಲಿಯಲಿಲ್ಲ.

''ಸರ್ವಜ್ಞನೆಂಬುವನು ಗರ್ವದಿಂದಾವನೇ
ಸರ್ವರೊಳೊಂದೊಂದು ನುಡಿಗಲಿತು ವಿದ್ಯದ
ಪರ್ವತವೇ ಆದ ಸರ್ವಜ್ಞ.''

ಆದರೆ ಹೇಳಿಕೊಡಬಲ್ಲವರೆಲ್ಲರೂ ಅವನ ಗುರುಗಳಾದರು. ಸದ್ಗುಣ, ಸಚ್ಚಾರಿತ್ರ್ಯ, ಸನ್ಮತಿ ಯಾರಲ್ಲಿ ಕಂಡರೂ ಅವರನ್ನು ಸರ್ವಜ್ಞ ಗುರುಗಳೆಂದು ಒಪ್ಪಿಕೊಳ್ಳುತ್ತಿದ್ದ.

"ಊರಿಂಗೆ ದಾರಿಯನು ಯಾರು ತೋರಿದೊಡೇನು ?
ಸಾರಾಯದಾನಿಜವ ತೋರುವಾ ಗುರುವು ತಾ
ನಾರಾದಡೇನು ಸರ್ವಜ್ಞ"

ಗುರುವಿನ ಮಹತ್ವವನ್ನು ಸರ್ವಜ್ಞ ಸಾರಿಸಾರಿ ಹೇಳುತ್ತಾನೆ. ಗುರು ದೈವವನ್ನು ತೋರಿದರೆ, ದೈವ ಗುರುವನ್ನು ತೋರುವುದು ಎಂದು ಹೊಗಳುತ್ತಾನೆ. ತಂದೆಗಿಂತಲೂ ಗುರುದೊಡ್ಡವನು – ತಂದೆ ಮಗನಿಗೆ ಬಲುಬುದ್ಧಿ ಹೇಳಬಲ್ಲ – ಗುರು ಬಂಧನವನ್ನೇ ಕಳಚಬಲ್ಲ.

"ಎತ್ತಾಗಿ ತೊತ್ತಾಗಿ ಹಿತ್ತಲದ ಗಿಡವಾಗಿ
ಮತ್ತೆ ಪಾದದಾ ಕೆರವಾಗಿ ಗುರುವಿನ
ಹತ್ತಲಿರು ಎಂದ ಸರ್ವಜ್ಞ"

ಆದರೆ ಗುರುವನ್ನು ಹೇಳದೆ ಕೇಳದೆ ಒಪ್ಪಿಕೊಳ್ಳುವ ಬಗ್ಗೆ ಸರ್ವಜ್ಞ ಎಚ್ಚರಕೊಡುತ್ತಾನೆ. ಲೋಕದಲ್ಲಿ ನಿಜಗುರುಗಳಿಗಿಂತ ಕಪಟಗುರುಗಳು ಹೆಚ್ಚೆಂಬುದನ್ನು ಅವನು ಚೆನ್ನಾಗಿಬಲ್ಲ. ಅಕ್ಕಸಾಲೆ ಚಿನ್ನವನ್ನು ಒರೆಯಿಟ್ಟು ನೋಡಿ ಪರೀಕ್ಷಿಸಿ ಅನಂತರ ಒಪ್ಪಿಕೊಳ್ಳುವಂತೆ ಗುರುವನ್ನು ಪರೀಕ್ಷಿಸಿ ಒಪ್ಪಿಕೊಳ್ಳಬೇಕು.

"ಒಂದರೊಳಗೆಲ್ಲವೂ ಸಂದಿಸಿರುವದನು ಗುರು
ಚಂದದಿಂ ತೋರಿಕೊಡದಿರಲು ಶಿಷ್ಯನವ
ಕೊಂದನೆಂದರಿಗು ಸರ್ವಜ್ಞ"

"ಅರಿವನರಿಯದ ಗುರುವು ಪರವನರಿಯದ ಶಿಷ್ಯ
ನೆರೆಯರಿಯದೋದು ಇವು ಮೂರು ಅಂಧಕನು
ತಿರುಗಾಡಿದಂತೆ ಸರ್ವಜ್ಞ"

ಗುರುವಿನ ಮಹತ್ವ, ಶಿವನ ಹಿರಿಮೆ, ಶಿವಸಂಪ್ರದಾಯಗಳನ್ನು ಕುರಿತು ಸರ್ವಜ್ಞ ಕೆಲವು ಮಾತುಗಳನ್ನಾಡಿದ್ದರೂ ಅವನನ್ನು ಕಟು ವೀರಶೈವನೆಂದು ಒಪ್ಪಿಕೊಳ್ಳುವುದು ಕಷ್ಟ. ಸರ್ವಜ್ಞ ಬ್ರಾಹ್ಮಣನಾಗಿರಬಹುದು ಎನ್ನುವ

ಒಂದು ವಾದವೂ ಇದೆ. ಇವನ ಮನಃಪ್ರವೃತಿ ವೀರಶೈವಕ್ಕಾಗಲೀ ಬ್ರಾಹ್ಮಣ್ಯಕ್ಕಾಗಲೀ ತಾಳೀಕಟ್ಟಿದಂತೆ ಕಂಡುಬರುವುದಿಲ್ಲ. ಅವಧೂತ ಮಾರ್ಗದಲ್ಲಿ ನಡೆವವರು ಜಾತ್ಯಾತೀತರಾಗಿರುತ್ತಾರೆ, ಸಂಪ್ರದಾಯದ ಕಟ್ಟು ಕಟ್ಟಳೆಗಳನ್ನು ಮುರಿದಿರುತ್ತಾರೆ. ಮಾನವನ ಆತ್ಮಪ್ರಗತಿಗೆ ಸಾಧಕವಾಗುವ ಎಲ್ಲ ಮಾರ್ಗಗಳನ್ನೂ, ಮಾರ್ಗದರ್ಶಕರನ್ನೂ ನಿರ್ಮತ್ಸರದಿಂದ ಒಪ್ಪಿಕೊಳ್ಳು ತ್ತಾರೆ. ಸರ್ವಜ್ಞನ ವಚನಗಳ ಆಧಾರದ ಮೇಲೆ ನಾವು ಹೇಳಬಹುದಾದರೆ ಅವನು ಅವಧೂತ ಮಾರ್ಗಾವಲಂಬಿ. ವೀರಶೈವ ಧರ್ಮತತ್ತ್ವಗಳನ್ನು ಅವನು ಪ್ರತಿಪಾದಿಸಿರುವ ಆಧ್ಯತೆಯಿಂದಲೇ ವೇದಾಂತವನ್ನೂ ಪ್ರತಿಪಾದಿಸಿ ದ್ದಾನೆ. ಉತ್ತಮ ಶರಣನಿಗೆತ್ತಿ ಕೈಮುಗಿಯುವ ಅವನು ಕೈ ಉತ್ತಮ ವೇದಾಂತಿಗೂ ಎತ್ತಿ ಮುಗಿಯುತ್ತದೆ. ಲಿಂಗಕ್ಕೆ ಮುಗಿಬಿದ್ದು ತೊಳಲಾಡು ವವರನ್ನು ಖಂಡಿಸುವಂತೆಯೇ ಜನಿವಾರಕ್ಕೆ ಜೋತುಬಿದ್ದವರನ್ನೂ ಖಂಡಿಸು ತ್ತಾನೆ. ನಾನು – ನನ್ನದು ಎನ್ನುವ ಮಮಕಾರವರ್ಜಿತವಾದ ಇವನ ಆಧ್ಯಾತ್ಮ ಸಾಧನೆಯಲ್ಲಿ ಜಾತಿ – ಮತಗಳ ಮಾಲಿನ್ಯ ಸೋಂಕಿಲ್ಲವೆಂದು ಧಾರಾಳವಾಗಿ ಹೇಳಬಹುದು.

ಧರ್ಮದರ್ಶನ, ಆಧ್ಯಾತ್ಮಸಾಧನೆಯನ್ನು ನಾಲ್ಕು ಮುತ್ತಿನಂಥ ಮಾತುಗಳಲ್ಲಿ ಸರ್ವಜ್ಞ ಹೇಳಿ ಮುಗಿಸುತ್ತಾನೆ. ಹೊರೆ ಹೊರೆ ಗ್ರಂಥಗಳನ್ನು, ಭಾಷ್ಯಗಳನ್ನು ಓದಿ ಮಥಿಸಿದವನಿಗೆ ದೊರೆಯುವ ಸತ್ಯವಾದರೂ ಇದಕ್ಕಿಂತ ಅಧಿಕವಾದುದೇ ?

ದೇವರು ಒಬ್ಬನೇ ಎಂದು ದೃಢವಾಗಿ ನಂಬು ; ದೇವರನ್ನು ಭಕ್ತಿಯಿಂದ ಜ್ಞಾನದಿಂದ ಒಲಿಸಿಕೊಳ್ಳುವುದಕ್ಕೆ ಪ್ರಯತ್ನಮಾಡು ; ಕಂಡು ಕಂಡುದೆಲ್ಲವನ್ನೂ ದೇವರೆಂದು ಪೂಜೆಮಾಡಿ, ಚಿತ್ತವನ್ನು ಹತ್ತೆಡೆಗೆ ಹರಿಬಿಟ್ಟು ಪತನಹೊಂದಬೇಡ ; ಯಾವ ಮಾರ್ಗಹಿಡಿದು ಹೋದರೂ ಗುರಿ ಒಂದೇ. ಬೇರೆ ಬೇರೆ ಮಾರ್ಗಗಳನ್ನು ಹಿಡಿದುಹೋಗುವವರನ್ನು ಕಡೆಗಾಣಿಸ ಬೇಡ ; ಕಣ್ಣುಮುಚ್ಚಿ ಬಕಧ್ಯಾನ ಮಾಡಿದರೆ ದೇವರು ದೊರೆಯುವುದಿಲ್ಲ. ಮನಸ್ಸಿನ ಮಾಯಾಮಲಗಳನ್ನು ಪರಿಹರಿಸಿ ಪರಿಶುದ್ಧನಾಗಿ ದೇವರನ್ನು ಕುರಿತು ಚಿಂತಿಸಿದರೆ ಅವನು ಕಾಣಿಸಿಕೊಳ್ಳುತ್ತಾನೆ – ಇದಿಷ್ಟು ಸಂಕ್ಷೇಪವಾಗಿ ಸರ್ವಜ್ಞನ ಆಧ್ಯಾತ್ಮ ವಿಚಾರ.

"ಒಬ್ಬನಲ್ಲದೆ ಜಗಕೆ ಇಬ್ಬರುಂಟೆ? ಮತ್ತೆ
ಒಬ್ಬ ಸರ್ವಜ್ಞ, ಕರ್ತನೀ ಜಗಕೆಲ್ಲ
ಒಬ್ಬನೇ ದೈವ! ಸರ್ವಜ್ಞ."

"ಆ ದೇವ ಈ ದೇವ ಮಾದೇವನೆನಬೇಡ
ಆ ದೇವರ ದೇವ ಭುವನ ಪ್ರಾಣಿಗಳಿ
ಗಾದವನೇ ದೇವ ಸರ್ವಜ್ಞ."

ಸ್ಥಾವರ ದೇವತೋಪಾಸನೆಯಿಂದ ಭಕ್ತನೂ ಸ್ಥಾವರವಾಗುತ್ತಾನೆ. ಅವನು ನೆನೆದಂತೆ ಅವನಾಗುತ್ತಾನೆ.

"ಕಲ್ಲು ಕಲ್ಲನೆ ಒಟ್ಟೆ ಕಲ್ಲಿನಲಿ ಮನೆಕಟ್ಟೆ
ಕಲ್ಲ ಮೇಲ್ಕಲ್ಲ ಕೊಳುವ ಮಾನವರೆಲ್ಲ
ಕಲ್ಲಿನಂತಹರು ಸರ್ವಜ್ಞ."

"ನಂಬುತಿರು ನಂಬದಿರು ಎಂಬುವರು ಮಾನವರು
ಸಂಬಾರವರೆವ ಬಲುಕಲ್ಲ ಹರನೆಂದು
ನಂಬುವವರಾರು? ಸರ್ವಜ್ಞ."

"ಪ್ರಾಣನೂ ಪರಮನೂ ಕಾಣದಲೆ ಒಳಗಿರಲು
ಮಾಣದೆ ಶಿಲೆಯ ಹಿಡಿದದಕೆ ಮೂರ್ಖತಾ
ಪ್ರಾಣಾತ್ಮನೆಂಬ ಸರ್ವಜ್ಞ."

"ಸತ್ಯಕ್ಕೆ ಸರಿಯಿಲ್ಲ ಚಿತ್ತಕ್ಕೆ ಸ್ಥಿರವಿಲ್ಲ
ಹಸ್ತದಿಂದಧಿಕ ಹಿತರಿಲ್ಲ; ಪರದೈವ
ನಿತ್ಯನಿಂದಿಲ್ಲ ಸರ್ವಜ್ಞ."

ಭಕ್ತಿ, ಜ್ಞಾನಗಳೆರಡಕ್ಕೂ ಸರ್ವಜ್ಞ ಸಮಾನಸ್ಥಾನಕೊಡುತ್ತಾನೆ. ಭಕ್ತಿಯ ನಿಷ್ಠೆಯೊಂದಿಗೆ ಜ್ಞಾನದ ವಿವೇಚನೆಬೇಕೆಂಬುದು ಅವನ ಮತ.

"ತೆರೆದ ಹಸ್ತವು ಲೇಸು ಹಿರಿದು ಪೂಜ್ಯವು ಲೇಸು
ಅರಸೊಲಿಯು ಲೇಸು ಸರ್ವಕ್ಕೂ ಶಿವನಿಂಗೆ
ಶರಣವೇ ಲೇಸು ಸರ್ವಜ್ಞ."

"ಎಲ್ಲರೂ ಶಿವನೆಂದರಿಲ್ಲಿಯೇ ಹಾಳಕ್ಕು !
ಎಲ್ಲರೂ ಶಿವನ ಮರೆದಿಹರೆ ಕೈಲಾಸ
ದಲ್ಲಿ ಹಾಳಕ್ಕು ! ಸರ್ವಜ್ಞ."

"ಕಡು ಭಕ್ತನಾಗಲೀ ಜಡೆಧಾರಿಯಾಗಲೀ
ನಡೆವ ವೃತ್ತಿಯಲಿ ನಡೆಯದೊಡಾ ಭಕ್ತಿ
ಹೊಡೆವ ಶಂಖೆಂದ! ಸರ್ವಜ್ಞ."

"ಮನದಲ್ಲಿ ನೆನವಿರಲು ತನುವೊಂದು ಮಠವಕ್ಕು
ಮನವೋಗಿ ಹಲವ ನೆನೆದಿಹರೆ ಅದು ಹಾಳು
ಮನೆಯೆಂದು ತಿಳಿಯೊ! ಸರ್ವಜ್ಞ."

"ದೇಹ ದೇವಾಲಯವು ಜೀವವೇ ಶಿವಲಿಂಗ
ಬಾಹ್ಯಂಗಳಳಿದು ಭಜಿಪಂಗೆ ಮುಕ್ತಿ ಸಂ-
ದೇಹವಿಲ್ಲೆಂದ ಸರ್ವಜ್ಞ."

ಜ್ಞಾನದ ಮಹತ್ವವನ್ನು ವಿವರಿಸುತ್ತಾ :

"ಜ್ಞಾನದಿಂ ಮೇಲಿಲ್ಲ ಶ್ವಾನನಿಂ ಕೀಳಿಲ್ಲ
ಭಾನುಮಂಡಲದಿಂ ಬೆಳಗಿಲ್ಲ, ಜಗದೊಳಗೆ
ಜ್ಞಾನವೇ ಅಧಿಕ ಸರ್ವಜ್ಞ."

ಜ್ಞಾನ, ಭಕ್ತಿ ಕೂಡಿದಲ್ಲಿ ಹಾಲಿಗೆ ಸಕ್ಕರೆ ಹಾಕಿದಂತಾಗುತ್ತದೆಂದು ಸರ್ವಜ್ಞನ ಅಭಿಮತ.

"ತತ್ತ್ವದಾ ಜ್ಞಾನತಾನುತ್ತಮವು ಎನಬೇಕು
ಮತ್ತೆ ಶಿವಧ್ಯಾನ ಬೆರೆದರು ಶಿವನಿಂ-
ದತ್ತಲೆನಬೇಕು ಸರ್ವಜ್ಞ."

ಭಗವಂತ ಸರ್ವಾಂತರ್ಯಾಮಿಯಾಗಿದ್ದಾನೆ, ಪ್ರತಿಯೊಂದು ವಸ್ತುವಿನೊಳಗೆ ಅವನು ಅಡಗಿ ಕುಳಿತಿದ್ದಾನೆ.

"ಸರ್ವದಂತರ್ಯಾಮಿ ಓರ್ವನೆಂಬುವ ತತ್ತ್ವ
ನಿರ್ದಿಷ್ಟವಾಗಿ ಇರುತಿರಲು ಮೋಕ್ಷವದು
ಸರ್ವರಿಗೆ ಸುಲಭ ಸರ್ವಜ್ಞ."

"ಸಣ್ಣನೆಯ ಮಳಲೊಳಗೆ ನುಣ್ಣನೆಯ ಶಿಲೆಯೊಳಗೆ
ಬಣ್ಣಿಸುತ ಬರೆದ ಪಟದೊಳಗೆ ಇರುವಾತ
ತನ್ನೊಳಗೆ ಇರನೆ ? ಸರ್ವಜ್ಞ."

"ಆನೆ ಕನ್ನಡಿಯಲ್ಲಿ ತಾನಡಗಿ ಇಪ್ಪಂತೆ
ಜ್ಞಾನವುಳ್ಳವರ ಹೃದಯದಲಿ ಪರಶಿವನು
ತಾನಡಗಿ ಇಹನು ಸರ್ವಜ್ಞ."

ಭಕ್ತಿ ಜ್ಞಾನದ ಅನುಸಂಧಾನ ಮಾಡುವ ಉದ್ದೇಶ ಸತ್ಯಶೋಧನೆ. ಸತ್ಯವೆಲ್ಲಿದೆ ? ನೆತ್ತಿಯ ಮೇಲೆ ಕಾಣುವ ನೀಲನಭವತ್ತ ಅಡಗಿ ಕುಳಿತಿದೆಯೋ – ದೇವಸ್ಥಾನಗಳಲ್ಲಿದೆಯೋ – ಗುರುಪೀಠಗಳಲ್ಲಿದೆಯೆ ?

"ಸತ್ಯವೆಂಬುದು ತಾನು ಹಿತ್ತಲದ ಗಿಡನೋಡ
ಮತ್ತೆಲ್ಲಿ ನೋಡಿ ಅರಸದೆಲೆ ತಾನಿರ್ದ
ಪತ್ತಿಲೇ ನೋಡ ! ಸರ್ವಜ್ಞ."

"ಇಲ್ಲಿಲ್ಲವೆಂಬುದನು ಇಲ್ಲಿಯೇ ಅರಸುವುದು !
ಇಲ್ಲಿಲ್ಲದಿಲ್ಲವೆಂದರಿದ ಒಡನೆ ಜಗ-
ವೆಲ್ಲ ಒಳಗಿಕ್ಕು ಸರ್ವಜ್ಞ."

ಸಾಧಕನಿಗೆ ಸತ್ಯದ ನೆಲೆ ಸಿಕ್ಕಿದುದಕ್ಕೆ ಕೆಲವು ಲಕ್ಷಣಗಳು ಕಂಡು ಬರುತ್ತವೆ. ಅವನ ಇರವಿನಿಂದಲೇ ನಾವು ಅವನನ್ನು ಜ್ಞಾನಿ ಎಂದರಿಯಬಹುದು.

"ಸತ್ಯವನು ಅರಿದಿಹರೆ ಸತ್ತಹಾಗಿರಬೇಕು
ಸತ್ಯವನು ಅರಿದು ಉಸುರಿದರೆ ಸತ್ತವರಿ
ಗತ್ತಹಾಗಕ್ಕು ಸರ್ವಜ್ಞ."

"ತನ್ನ ನೋಡಲಿ ಎಂದು ಕನ್ನಡಿಯು ಕರೆಯುವದೆ?
ತನ್ನಲ್ಲಿ ಜ್ಞಾನ ಉದಿಸಿದ ಮಹಾತ್ಮನು ,
ಕನ್ನಡಿಯಂತೆ ಸರ್ವಜ್ಞ."

"ತನ್ನ ತಾನರಿದಂಗೆ ಭಿನ್ನಭಾವನೆಯಿಲ್ಲ
ತನ್ನವರಿಲ್ಲ ಪರರಿಲ್ಲ, ತ್ರೈಭುವನ
ತನ್ನೊಳಗೆ ಇಹುದು ಸರ್ವಜ್ಞ."

ಸರ್ವಜ್ಞನ ಅಂತರ್ಮುಖ ಎಷ್ಟು ಸತ್ಯಯುತವಾಗಿ, ಧೀಮಂತವಾಗಿ, ವಿಶ್ವಧರ್ಮದ ಸಮನ್ವಯ ಸಿದ್ಧಾಂತದ ಪ್ರತೀಕವಾಗಿದೆಯೋ ಅವನ ಬಹಿರ್ಮುಖವೂ ಅಷ್ಟೇ ಉಜ್ವಲವಾಗಿದೆ. ಲೋಕದ ವೃತ್ತಿ ಪ್ರವೃತ್ತಿಗಳನ್ನು ಸರ್ವಜ್ಞ ನೋಡುತ್ತಾನೆ. ಅವನ ತೇಜಃಪುಂಜ ಚಕ್ಷುಸ್ಸುಗಳಿಗೆ ಬೀಳದ ವಸ್ತುವಿಲ್ಲ. ಯೋಗ್ಯವಾದುದನ್ನು ಅಯೋಗ್ಯವಾದುದನ್ನು, ಪವಿತ್ರವಾದುದನ್ನು ಅಪವಿತ್ರವಾದುದನ್ನು, ಪುಣ್ಯಪಾಪಗಳನ್ನು ಸಮಗ್ರವಾಗಿ ನೋಡಿರುವ ಸರ್ವಜ್ಞ ಗೌರೀಶಂಕರದ ಮೇಲೆ ನಿಂತು ಲೋಗರನ್ನು ಹೀಗಳೆಯುವುದಿಲ್ಲ. ತಪ್ಪುದಾರಿ ಹಿಡಿದ ಲೋಗರನ್ನು ಭವಿಗಳೆಂದು ಕಡೆಗಾಣಿಸಿ ಅವರನ್ನು ಕುಂಭೀಪಾಕನರಕಕ್ಕೆ ತಳ್ಳುವುದಿಲ್ಲ. ಅವನ ಹೃದಯ ಅಸೀಮ ಅಂತಃಕರಣದ ಮಹಾಸಾಗರ. ಅವನ ಮಾತು ಹಾಸ್ಯರಸ ಬೆರೆತ ರಸಸೋನೆ. ಅಜ್ಞಾನದ ಸುಳ್ಳುಹೊದಕೆಯನ್ನು ತೆಗೆದು ಜನರನ್ನು ಎಚ್ಚರಿಸುತ್ತಾನೆ. ಜ್ಞಾನದ ದಿವ್ಯಪ್ರಭೆಯ ಕಡೆಗೆ ಜನರ ಲಕ್ಷ್ಯಸೆಳೆದು 'ಆ ಚಿತ್ರ ನೋಡಿದಿರಲ್ಲಾ – ಈ ಚಿತ್ರ ನೋಡಿ' ಎಂದು ಹೇಳುತ್ತಾನೆ.

ಬೇರೆ ಬೇರೆ ಜಾತಿ, ಮತದವರ ಮೇಲೆ ಸರ್ವಜ್ಞನಾಡಿರುವ ಮಾತುಗಳು ಅವನ ಸೂಕ್ಷ್ಮದರ್ಶಿತ್ವ, ರಸಹಾಸ್ಯ, ಸತ್ಯಪ್ರೇಮದ ನಿದರ್ಶನಗಳಾಗಿವೆ.

ಬ್ರಾಹ್ಮಣ :

"ಹೊಲಗೇರಿಯುಲಿ ಹುಟ್ಟಿದೆಲುವಿನಾ ಮನೆಯುಲ್ಲಿ
ಸಲೆ ಕರ್ಮದಾನಿಯೆನಿಸದೆ ಹಾರುವನು
ಕುಲಕೆ ಹೋರುವನು ಸರ್ವಜ್ಞ."

"ಎಂಜಲೆಂಜಲು ಎಂದು ಅಂಜುವರು ಹಾರುವರು
ಎಂಜಲಿಂದಾದ ತನುವಿರಲು ಅದನರಿದು
ಅಂಜುತಿಹರೇಕೆ? ಸರ್ವಜ್ಞ."

"ಹೆಂಡಕ್ಕೆ ಹೊಲೆಯನು, ಕಂಡಕ್ಕೆ ಕಟುಗನು
ದಂಡಕ್ಕೆ ಕೃಷಿಕ, ಹಾರುವನು ತಂದು ತಾ
ಪಿಂಡಕ್ಕೆ ಇಡುವ ಸರ್ವಜ್ಞ."

ಜೈನ:

"ಬೊಟ್ಟು ತಾಗಿಸಿ ಬೊಟ್ಟನಿಟ್ಟು ಒಪ್ಪುವ ಜೈನ
ನೆಟ್ಟನೆ ಸ್ವರ್ಗ ಪಡೆವಡೆ ಸಾಣೆಕಲ್
ಕೆಟ್ಟ ಕೇಡೇನು ಸರ್ವಜ್ಞ."

"ಹೇನು ಕೂರಿಗಳನ್ನು ತಾನಾಗಿ ಜಿನಕೊಲ್ಲ
ಸ್ಥಾನಪಲ್ಲಟವ ಮಾಡಿದೊಡಾಮೇಲೆ
ಏನಾದುದರಿಯ ಸರ್ವಜ್ಞ."

"ಜೀವಿ ಜೀವವ ತಿಂದು ಜೀವಿಗಳ ಹುಟ್ಟಿಸಿರೆ
ಸಾವು ಎಲ್ಲಿಹುದು? ಸ್ವಾರ್ಥವೆ ಜಗದೊಳಗೆ
ಸಾವೆಂದು ತಿಳಿಯೊ! ಸರ್ವಜ್ಞ."

ಸಾದರ:

"ಸಾದರಿಗೆ ಮಾದರಿಗೆ ಭೇದವೇನಿಲ್ಲಯ್ಯ
ಮಾದಿಗನು ತಿಂಬ ಸತ್ತುದನು
ಸಾದ ತನಗಾದವರತಿಂಬ! ಸರ್ವಜ್ಞ."

ಕಮ್ಮೆ:

"ಕಮ್ಮೆಯನ ಚೇಳಿನಾ ಹೊಮ್ಮೆರಡು ಒಂದಯ್ಯ
ನೆಮ್ಮಿದರೆ ಹೊಡೆದಿಹುದು, ಕಮ್ಮೆ ತಾ
ನೆಮ್ಮದೆಲೆ ಹೊಡೆವ ಸರ್ವಜ್ಞ."

ತಿಗುಳ :

''ಕಾಳಕೂಟದ ವಿಷವು ಚೇಳುನಂಬಿದ ಹಗೆಯು
ಹಾಳೂರ ಚುರಚಿ, ನಸುಗುನ್ನಿ, ತಿಗುಳರ
ಗಾಳಿ ಬೇಡೆಂದ ಸರ್ವಜ್ಞ.''

ಅಕ್ಕಸಾಲಿ :

''ಅಕ್ಕಸಾಲೆಯನೂರಿಗೊಕ್ಕಲೆಂದೆನಬೇಡ
ಬೆಕ್ಕು ಬಂದಿಲಿಯು ಹಿಡಿವಂತೆ ಊರಿಗವ
ರಕ್ಕಸನು ತಾನು ಸರ್ವಜ್ಞ.''

ಬಣಜಿಗ :

"ಹಣಜೆ ಭತ್ತವು ಅಲ್ಲ ಅಣಬೆ ಸತ್ತಿಗೆಯಲ್ಲ
ಕಣಕದಾ ಕಲ್ಲು ಮಣಿಯಲ್ಲ, ಬಣಜಿಗನು
ಗುಣವಂತನಲ್ಲ ಸರ್ವಜ್ಞ."

''ಎಳ್ಳುಗಾಣಿಗ ಬಲ್ಲ ಸುಳ್ಳು ಸಿಂಪಿಗ ಬಲ್ಲ
ಕಳ್ಳರನು ಬಲ್ಲ ತಳವಾರ, ಬಣಜಿಗನು
ಎಲ್ಲವನು ಬಲ್ಲ ಸರ್ವಜ್ಞ.''

ಗಾಣಿಗ :

''ಗಾಣಿಗನು ಈಶ್ವರನ ಕಾಣನೆಂಬುದು ಸಹಜ
ಏಣಾಂಕಧರನು ಧರೆಗಿಳಿಯಲವನಿಂದ
ಗಾಣವಾಡಿಸುವ ಸರ್ವಜ್ಞ.''

ಬೇಡ :

''ಜೇಡಂಗೆ ಶುಚಿಯಿಲ್ಲ ಬೋಡಂಗೆ ರುಚಿಯಿಲ್ಲ
ಕೂಡಿಲ್ಲದಂಗೆ ಸುತರಿಲ್ಲ, ಜಾಡ ತಾ
ಮೂಢಾತ್ಮನಲ್ಲ ಸರ್ವಜ್ಞ.''

ಬೆಸ್ತ :

''ಕಿರಿಮೀನು ಹಿರಿಮೀನು ಕೊರೆಕೊರೆದು ತಿಂಬಾತ-
ಗಿರುತಿರುವನೊಬ್ಬ ಮಗಸಾಯಿ, ನೋವಿನಾ
ತೆರನ ತಾನರಿವ ಸರ್ವಜ್ಞ.''

ಡೊಂಬ :

"ಕತ್ತಿಗಂ ಕೋಡಿಲ್ಲ ತೊತ್ತಿಗಂ ಗುಣವಿಲ್ಲ
ಹತ್ತಿಯಾ ಹೊಲಕೆ ಗಿಳಿಯಿಲ್ಲ ಡೊಂಬನಿಗೆ
ವೃತ್ತಿಯೇ ಇಲ್ಲ ಸರ್ವಜ್ಞ."

ಜಾತಿ ಮತಗಳ ವೃತ್ತಿಗಳ ಅಗ್ಗಳಿಕೆಯನ್ನು ಸಾರುವವರ ಪೈತ್ಯಕ್ಕೆ ಸರ್ವಜ್ಞನ ವಚನಗಳು ಪರಮೌಷಧಿಗಳಾಗಿವೆ. ಜಾತಿಮತಗಳ ಹೋರಾಟವನ್ನು ಕುರಿತು ಸರ್ವಜ್ಞ ಆಡಿರುವ ಮಾತುಗಳು ಅವನ ಮನಸ್ಸಿನ ಪಕ್ವತೆ, ಪಾರಿಶುದ್ಧ್ಯ ತೋರುತ್ತದೆ.

"ನಡೆಯೊದೊಂದೇ ಭೂಮಿ ಕುಡಿಯೊದೊಂದೇ ನೀರು
ಸುಡುವಗ್ನಿಯೊಂದೆ ಇರುತಿರೆ ಕುಲಗೋತ್ರ
ನಡುವೆ ಎತ್ತಣದು ಸರ್ವಜ್ಞ."

"ಜಾತಿಹೀನರ ಮನೆಯ ಜ್ಯೋತಿತಾ ಹೀನವೇ
ಜಾತಿ ವಿಜಾತಿಯನಬೇಡ ದೇವನೊಲಿ
ದಾತನೆ ಜಾತ ಸರ್ವಜ್ಞ."

ಸರ್ವಜ್ಞ ಕನ್ನಡ ಕಾವ್ಯಾಕಾಶದಲ್ಲಿ ಮಾತ್ರವೇ ಅಲ್ಲ – ಜಗತ್ತಿನ ವಿಚಾರಪ್ರಪಂಚದಲ್ಲಿ ಅನನ್ಯವಾದ ಸ್ಥಾನ ದೊರಕಿಸಿಕೊಂಡಿದ್ದಾನೆ. ಜನಪದ ಭಾಷೆ, ಭಾವ, ವಿಚಾರಗಳನ್ನೇ ಧಾರಾಳವಾಗಿ ಉಪಯೋಗಿಸಿಕೊಂಡು ತನ್ನ ರತ್ನಸದೃಶ ವಚನಗಳನ್ನು ಕನ್ನಡಧರೆಯಲ್ಲಿ ಬಿತ್ತಿದ್ದಾನೆ. ಮಾನವನನ್ನು ಪರಿಶುದ್ಧ ಬಾಳ್ವೆ, ತ್ಯಾಗಮಯ ಜೀವನದ ಕಡೆ ಎಳೆದು ಅವನ ಆತ್ಮೋದ್ಧಾರಕ್ಕೆ ನೆರವಾಗಿದ್ದಾನೆ. ಸರ್ವಜ್ಞ ಕೇವಲ ಜನಪದ ಕವಿಯಲ್ಲ – ಜನಪದ ಕವಿಚಕ್ರವರ್ತಿಯಾಗಿದ್ದಾನೆ.

# ೧೪. ಉಮರ್ ಖಯ್ಯಾಂ

## ೧

ಪರ್ಶಿಯನ್ ಕಾವ್ಯದ ನಂದನವನದಲ್ಲಿ ವಸಂತಗೀತೆಯನ್ನು ಮೊದಲು ಹಾಡಿದ ಕವಿ ಬುಲ್‌ಬುಲ್ ಉಮರ್‌ಖಯ್ಯಾಂ. ಇವನಾನಂತರ ಆಗಮಿಸಿ ಇವನಿಗಿಂತಲೂ ಪ್ರಸಿದ್ಧರಾದ ಸಾದಿ, ಮನ್‌ಸೂರ್, ಅತ್ತಾರ್, ರೂಮಿ, ಜಾಮಿ, ನಿಜಾಮಿ ಮತ್ತು ಹಾಫೀಜ್ ಕವಿಗಳ ಮೇಲೆ ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಇವನ ಪ್ರಭಾವ ಮುದ್ರೆಬೀಳದೆ ಹೋಗಿಲ್ಲ. ಈ ಕಾವ್ಯ ಪರಂಪರೆಯ ಆದಿಯಲ್ಲಿ ಬಂದ ಉಮರ್‌ಖಯ್ಯಾಂ ಮತ್ತು ಅಂತ್ಯದಲ್ಲಿ ಬಂದ ಹಾಫೀಜರನ್ನು ಪರ್ಶಿಯನ್ ಕಾವ್ಯರಮಣಿಯ ಎರಡು ಕಣ್ಣುಗಳೆಂದು ಕರೆಯುವ ವಾಡಿಕೆಯಿದೆ.

ಉಮರನ ತರುವಾಯದ ಕವಿಗಳಿಗೆ ಪರ್ಶಿಯಾದಲ್ಲಿ ದೊರೆತ ಮನ್ನಣೆ ಉಮರನಿಗೆ ಸಿಕ್ಕಿದಂತೆ ಕಂಡು ಬರುವುದಿಲ್ಲ. ಅವನ ಖ್ಯಾತಿ ಹೆಚ್ಚಾಗಿ ಪರ್ಶಿಯಾದೇಶದ ಸಾಹಿತ್ಯವನ್ನು ಪ್ರೀತಿಸುವ ವಿದೇಶಗಳಲ್ಲಿ ಹಬ್ಬಿದೆ. ಐರೋಪ್ಯ ಜಗತ್ತಿಗೆ ಕಾಳಿದಾಸ, ಉಮರ್‌ಖಯ್ಯಾಂ ಇವರಿಬ್ಬರ ಪರಿಚಯ ವಿರುವಷ್ಟು ಉಳಿದ ಪಾರಸೀ ಹಾಗೂ ಭಾರತೀಯ ಕವಿಗಳ ಪರಿಚಯವಿಲ್ಲ ವೆಂದರೆ ಇವರ ಕೃತಿಗಳ ಅಗಾಧವ್ಯಾಪ್ತಿಯ ಕಲ್ಪನೆ ಬರುತ್ತದೆ.

ಉಮರ್‌ಖಯ್ಯಾಂ ಕವಿಯ ಪರಿಚಯವನ್ನು ಐರೋಪ್ಯ ಜಗತ್ತಿಗೆ ೧೮೫೮ ರಲ್ಲಿ ಮಾಡಿಸಿದವನು ಫಿಟ್ಸ್‌ಜೆರಲ್ಡ್ ಎಂಬ ಆಂಗ್ಲ ಕವಿ. ಫಿಟ್ಸ್ ಜೆರಲ್ಡನ ರುಬಾಯಿಯಾತ್ ಪ್ರಕಟವಾದಾಗ ಅದಕ್ಕೆ ದೊರೆತ ಪ್ರೋತ್ಸಾಹ ಹೃದಯವಿದ್ರಾವಕವಾಗಿತ್ತು. ಅವನು ಪ್ರಕಟಮಾಡಿದ ಮೊದಲನೆಯ ಆವೃತ್ತಿಯ ೨೫೦ ಪ್ರತಿಗಳು ಕೂಡ ಮಾರಾಟವಾಗದೆ ಕೊಳೆಯುತ್ತ ಕುಳಿತವು. ಪ್ರಕಾಶಕರು ಪುಸ್ತಕದ ಬೆಲೆಯನ್ನು ಐದು ಷಿಲಿಂಗುಗಳಿಂದ

ಒಂದು ಪೆನ್ನಿಗೆ (ಸುಮಾರು ರೂ. ೩-೧೨-೦ ರಿಂದ ಒಂದು ಆಣೆಗೆ) ಇಳಿಸಿದರು. ಆಗಲೂ ಪುಸ್ತಕಗಳನ್ನು ಕೇಳುವವರಿಲ್ಲ. ಕೆಲವು ವರ್ಷಗಳಾ ನಂತರ ಒಂದು ಪ್ರತಿಯನ್ನು ಕಂಡು ಮೆಚ್ಚಿಕೊಂಡ ರೋಸೆಟಿ ಕವಿ ತನ್ನ ಮಿತ್ರ ಸ್ವಿನ್‌ಬರ್ನ್ನನಿಗೆ ರುಬಾಯಿಯಾತಿನ ಪರಿಚಯಮಾಡಿಕೊಟ್ಟ. ಸ್ವಿನ್‌ಬರ್ನ್ ಈ ಕಾವ್ಯವನ್ನು ಕಂಡು ಹುಚ್ಚೆದ್ದು ಕೆಲವು ಪ್ರತಿಗಳನ್ನು ಕೊಂಡು ತನ್ನ ಗೆಳೆಯರಿಗೆ ಪಾರಿತೋಷಿಕ ಕೊಟ್ಟ. ಈ ಉಭಯ ಕವಿಗಳ ಮೆಚ್ಚಿಗೆಯಿಂದ ಉಳಿದಿದ್ದ ಪ್ರತಿಗಳಿಗೆ ಶುಕ್ರಮಹಾದೆಶೆ ಬಂದು ಅವುಗಳ ಬೆಲೆ ಒಮ್ಮೆಲೇ ೨೧ ಷಿಲಿಂಗುಗಳಿಗೇರಿ ರುಬಾಯಿಯಾತ್ ಇಂಗ್ಲೆಂಡಿನ ಪ್ರತಿಯೊಂದು ಮನೆಯಲ್ಲಿಯೂ ನಲಿದಾಡುವಂತಾಯಿತು. ಆವೃತ್ತಿಗಳ ಮೇಲೆ ಆವೃತ್ತಿಗಳು ಪ್ರಕಟವಾದವು. ರುಬಾಯಿಯಾತ್ ಓದುವುದೂ ಆ ಬಗ್ಗೆ ಚರ್ಚೆಮಾಡುವುದೂ ಶಿಷ್ಟತೆಯ ಲಕ್ಷಣವಾಗುತ್ತ ಬಂತು.

ರುಬಾಯಿಯಾತಿನ ಖ್ಯಾತಿ ಇಂಗ್ಲೆಂಡಿಗೇ ಅಡಕವಾಗಲಿಲ್ಲ. ಅದು ಅನೇಕ ಐರೋಪ್ಯಭಾಷೆಗಳಿಗೆ ಅನುವಾದಗೊಂಡಿತು. ಉಮರ್ ಕವಿಯ ವಿಶ್ವಖ್ಯಾತಿಗೆ ಫಿಟ್ಸ್‌ಜೆರಲ್ಡನ ಅನುವಾದವೇ ಕಾರಣ. ಭಾವಪೂರ್ಣವೂ, ರಾಗರಸರಂಜಿತವೂ, ಮೃದುಮಧುರಶಬ್ದ ಸಂಯುಕ್ತವೂ ಆದ ಅವನ ಅನುವಾದ ಒಂದು ಸ್ವತಂತ್ರಕೃತಿಯಂತೆ ಬೆಳಗುತ್ತಿದೆ. ಈ ಅನುವಾದ ದಿಂದಲೆ ಫಿಟ್ಸ್‌ಜೆರಲ್ಡ್ ಇಂಗ್ಲಿಷ್ ಕಾವ್ಯದ ಪ್ರಭಾಮಂಡಲದಲ್ಲಿಯೂ ತನ್ನದೇ ಆದ ಸ್ಥಾನವನ್ನು ದೊರಕಿಸಿಕೊಂಡ. ಶ್ರೀ ಡಿ. ವಿ. ಗುಂಡಪ್ಪ ನವರು ಹೇಳುವಂತೆ 'ಉಮರನ ಹೃದಯವೆಂತಹುದೆಂದು ತನಗೆ ತೋರಿ ಬಂದಿತ್ತೋ ಅದನ್ನು ವಿಶದವಾಗಿ ಪುನರಾವಿರ್ಭಾವ ಮಾಡಿಸಿಕೊಡುವುದು ತನ್ನ ಕೆಲಸವೇ ಹೊರತು ಅಕ್ಷರಕ್ಷರವನ್ನೂ ಮಾತಿಗೆ ಮಾತನ್ನೂ ಬದಲಿಡು ವುದು ತನ್ನ ಕೆಲಸವಲ್ಲವೆಂದು ಆತ ಭಾವಿಸಿದ್ದ. ಕಿವಿಗೆ ಲಲಿತವೂ ಗಂಭೀರವೂ ಆದ ಪದಗಳು, ಗಮನವನ್ನು ಹಿಡಿದು ನಿಲ್ಲಿಸಬಲ್ಲ ವಾಕ್ಯ ಚಮತ್ಕಾರ, ಪ್ರತ್ಯಕ್ಷಾರ್ಥಕ್ಕಿಂತ ಆಳವಾಗಿ ಮನಸ್ಸಿನೊಳಕ್ಕಿಳಿದು ನಿಂತು ಪದೇಪದೇ ಸ್ಮರಣೆಮಾಡಿಕೊಳ್ಳುವ ಧ್ವನಿತಾರ್ಥ, ಗಹನ ಚಿಂತೆಯ ನಡುವೆ ಮೃದು ಹಸಿತ – ಇವು ಫಿಟ್ಸ್‌ಜೆರಲ್ಡಿನಿಂದಾದ ಉಮರನ ಪುನರವತಾರಕ್ಕೆ

ಲೋಕಪ್ರೀತಿಯನ್ನು ಸಂಪಾದಿಸಿಕೊಟ್ಟಿರುವ ಗುಣಗಳು. ಈ ಕಾವ್ಯವು ರಸಿಕ ಪ್ರಪಂಚದಲ್ಲಿ - ಗುಲಾಬಿಯ ಕೋಮಲತೆ, ಮಲ್ಲಿಗೆಯ ಸೌರಭ, ಜಾಜಿಯ ಸೌಕುಮಾರ್ಯ - ಇವೆಲ್ಲವನ್ನೂ ಸೇರಿಸಿಕೊಂಡಿರುವ ಒಂದು ದಿವ್ಯ ಪುಷ್ಪಗುಚ್ಛವನ್ನು ಹೋಲುತ್ತದೆ.'

ಆದರೆ ಫಿಟ್ಸ್‌ಜೆರಲ್ಡನ ರುಬಾಯಿಯಾತಿಗೂ ಉಮರನ ಮೂಲ ಕಾವ್ಯಕ್ಕೂ ಅರ್ಥ - ಭಾವ ವ್ಯತ್ಯಾಸ ವಿಪುಲವಾಗಿದೆ. ಪ್ರೊ. ಬೆರಗಾರ್ಡ್ ಅವರು ಹೇಳುವಂತೆ 'ಉಮರನ ಕೃತಿ ಸೂಫಿದರ್ಶನದ ಉತ್ತಮ ನಿದರ್ಶನ.' ಆದರೆ ಪಾಶ್ಚಾತ್ಯ ದೇಶಗಳಲ್ಲಿ ಆ ಭಾವನೆಯಿಲ್ಲ. ಫಿಟ್ಸ್‌ಜೆರಲ್ಡನ ಅನುವಾದದ ಮೂಲಕ ಉಮರನ ಪರಿಚಯಮಾಡಿಕೊಂಡಿರುವವರು ವಿಪರೀತ ಕಲ್ಪನೆ ಮಾಡಿಕೊಂಡಿದ್ದಾರೆ. ಫಿಟ್ಸ್‌ಜೆರಲ್ಡ್ ಗುರುಋಣವನ್ನು ಸರಿಯಾಗಿ ಸಲ್ಲಿಸಿದ ಹಾಗೆ ಕಂಡು ಬರುವುದಿಲ್ಲ. ಸೂಫಿಯ ಬಾಯಲ್ಲಿ ಅವನು ಹಾಕುವ ಮಾತುಗಳು ಧರ್ಮದ್ವೇಷವನ್ನೂ ನಾಸ್ತಿಕತೆಯನ್ನೂ ಸಾರುತ್ತಿವೆ. ತಾನೇ ಸೂಫಿಯಾಗಿದ್ದ ಫಿಟ್ಸ್‌ಜೆರಲ್ಡ್ ಈ ಅಪಚಾರವೆಸಗಿರುವುದು ಇಮ್ಮಡಿ ವ್ಯಥೆಗೆ ಕಾರಣವಾಗಿದೆ.

ಕೇವಲ ಭಾವಾನುವಾದವನ್ನೇ ಗುರಿಯಾಗಿಟ್ಟುಕೊಂಡ ಫಿಟ್ಸ್‌ಜೆರಲ್ಡ್ ಉಮರನ ಅನೇಕ ಪದ್ಯಗಳ ಭಾವಗಳನ್ನು ಕ್ರೋಢೀಕರಿಸಿ ತನ್ನ ರುಬಾಯಿಯಾತ್ ಕಟ್ಟಿರುವುದಲ್ಲದೆ ಇತರ ಪರ್ಶಿಯನ್ ಕವಿಗಳ (ಮುಖ್ಯವಾಗಿ ಹಾಫೀಜನ) ಕೃತಿಗಳಲ್ಲಿನ ಭಾವಗಳನ್ನೂ ತನ್ನ ರುಬಾಯಿಯಾತ್‌ನಲ್ಲಿ ಸೇರಿಸಿಬಿಟ್ಟಿದ್ದಾನೆ. ಫಿಟ್ಸ್‌ಜೆರಲ್ಡನ ರುಬಾಯಿಯಾತ್ ಹೆಚ್ಚು ಕಡಿಮೆ ಅವನ ಸ್ವತಂತ್ರ ಕೃತಿ. ಅದು ಉಮರನದೆಂದು ಭಾವಿಸಿದಲ್ಲಿ ಕೆಲವು ವಿಮರ್ಶಕರು ಮಾಡಿದ ದೋಷಕ್ಕೇ ನಾವೂ ಪಕ್ಕಾಗುತ್ತೇವೆ.

ಫಿಟ್ಸ್‌ಜೆರಲ್ಡನ ಮೂಲಕ ಉಮರನ ಕಾವ್ಯವನ್ನೋದಿದ ಪಂಡಿತರು ಅವನ ಬಗ್ಗೆ ವಿಷಪಥವಾದ ವ್ಯಾಖ್ಯೆಮಾಡಿದ್ದಾರೆ. ಟೆನಿಸನ್ ಉಮರನನ್ನು 'ಬೃಹತ್ ನಾಸ್ತಿಕ'ನೆಂದು ಕರೆದಿದ್ದಾನೆ; ಗ್ಲಾಸ್ಗೋ ವಿಶ್ವವಿದ್ಯಾನಿಲಯದ ಡಾ. ಹೇಸ್ಟಿ ಅವನನ್ನು 'ಕುಡುಕ, ಪತಿತ, ಪಿಶಾಚಿಯ ರಾಯಭಾರಿ' ಎಂದು ಕರೆದಿದ್ದಾನೆ; ಕಾರ್ಲೈಯಿಲ್ ಅವನನ್ನು 'ಮುಹಮ್ಮದೀಯ ಲಂಡ'

ಎಂದು ಕರೆದಿದ್ದಾನೆ; ಹೇಸ್ಟಿಯ ದೃಷ್ಟಿಯಲ್ಲಿ ಉಮರನ ರುಬಾಯಿಗಳು 'ಒರಟು ಹಾಸ್ಯ, ಟೊಳ್ಳು ವಿಚಾರ, ಅಶ್ಲೀಲ ಹಾಡುಗಳಿಂದ ತುಂಬಿದ ಹೊಲಸು.' ಉಮರನ ಮೂಲಕೃತಿಯ ಪರಿಚಯವಿದ್ದವರ ಅಭಿಪ್ರಾಯ ಇದಕ್ಕೆ ವಿರುದ್ಧವಾಗಿದೆ. ಮೊಘಲ ಚಕ್ರವರ್ತಿ ಅಕ್ಬರ್ 'ಹಾಫೀಜನ ಒಂದು ಗೀತೆ ಮಧುವಿನಂತೆ, ಉಮರನ ಚೌಪದಿ ಅದರ ರಸಸಾರವಿದ್ದಂತೆ' ಎಂದು ಅಭಿಪ್ರಾಯಪಟ್ಟಿದ್ದಾನೆ. ಡಾ. ಫೆಡರಿಕ್ ಬೋರ್ಡೆಸ್ಟೆಡ್ 'ವಸ್ತುವಿನ ಅಂತರಂಗವನ್ನು ಒಳಹೊಕ್ಕು ನೋಡುವ ಸೂಕ್ಷ್ಮವಾದ ಕಣ್ಣುಗಳು, ಅನಂತ ಬೆಳಕನ್ನರಸುವ ಪ್ರಬುದ್ಧ ಮನಸ್ಸು, ವಿಶೇಷವಾದುದನ್ನು ವರ್ಣಿಸಲು ಸಾಂಪ್ರದಾಯಿಕ ಮಾರ್ಗ ಅಪೂರ್ಣವಾದುದೆಂಬುದನ್ನರಿತ ಸ್ಪಷ್ಟತಿಳುವಳಿಕೆ, ಸತ್ಯದ ಬಗ್ಗೆ ಆಳವಾದ ಅನುಭವ ಹಾಗೂ ಪ್ರೇಮ ಉಮರನಲ್ಲಿ ಕೂಡಿವೆ.... ಉಮರ್ ಬರೆದುದು ಸ್ವಲ್ಪ. ಆದರೆ ಆತ ಬರೆದಿರುವುದನ್ನು ಪೌರ್ವಾತ್ಯ ಕಾವ್ಯದ ಜೀವಾಳವೆಂದು ನಾವು ಪರಿಗಣಿಸಬಹುದು.' ಎಂದು ಅಭಿಪ್ರಾಯ ಪಟ್ಟಿದ್ದಾನೆ. ಡಾ. ಬೆರಗಾರ್ಡ್ ಉಮರನ ಕಾವ್ಯವನ್ನು ರೂಮಿ, ಅತ್ತರ್, ಸಾದಿ ಮತ್ತಿತರ ಪರ್ಶಿಯಾ ಮಹಾಕವಿಗಳ ಕೃತಿಗಳಿಗೆ ಹೋಲಿಸಿದ್ದಾರೆ.

ಉಮರನ ಕಾವ್ಯದ ಬಗ್ಗೆ ಪಾಶ್ಚಾತ್ಯರು ವಿರೋಧಾಭಿಪ್ರಾಯ ತಳೆಯಲು ಅವರು ಅದರ ಸೂಫಿ ಸಂಕೇತವನ್ನು ಮರೆತುದೇ ಕಾರಣ. ಷೇಕ್ಸ್‌ಪಿಯರನ ಸುನೀತಗಳು, ಕೀಟ್ಸನ ಪ್ರಣಯ ಗೀತೆಗಳು, ಸ್ವಿನ್‌ಬರ್ನನ ಉತ್ಕಂಠ ಪ್ರಣಯ ಕಾವ್ಯವನ್ನು ಓದಿದ್ದ ಅವರಿಗೆ ಉಮರನ ಕಾವ್ಯದಲ್ಲಿ ಅವುಗಳ ಪ್ರತಿಧ್ವನಿಯೇ ಕೇಳಿಸಿತು.

ಸೂಫಿ ತತ್ತ್ವಾರ್ಥ ದೃಷ್ಟಿಯಲ್ಲಿ ಉಮರನ ಕೃತಿಗಳನ್ನು ವ್ಯಾಖ್ಯಾನ ಮಾಡಿ ವಿದ್ವಜ್ಜನರ ಗಮನ ಸೆಳೆದವರು ಡಾ. ಬೆರಗಾರ್ಡ್ ಮತ್ತು ಮುಂಬಯಿಯ ಜೆ. ಇ. ಸಕಲಾತವಾಲಾ ಅವರು. ಸಕಲಾತವಾಲಾ ಉಮರನ ಬಗ್ಗೆ ದೊರೆಯಬಹುದಾದ ಎಲ್ಲ ಪ್ರಮಾಣ ಗ್ರಂಥಗಳನ್ನೂ ಸಂಗ್ರಹಿಸಿ ತಮ್ಮ ಪ್ರಸಿದ್ಧ ಉಮರ್ ಭಂಡಾರವನ್ನು ಸ್ಥಾಪಿಸಿದರು. ಅವನ ಬಗ್ಗೆ ಅನೇಕ ಗ್ರಂಥ, ಲೇಖನಗಳನ್ನು ಬರೆದರು. ಅವರ ಪ್ರೇರಣೆಯಿಂದ ಆರ್. ಪಿ. ಬಾಜಿವಾಲಾಯವರು ಮೌಲಾನಾ ಷಿಬ್ಲಿಯವರ ವ್ಯಾಖ್ಯಾನವನ್ನು

ಅನುವಾದ ಮಾಡಿ ಉಮರನ ಮೂಲಕೃತಿಯ ಪರಿಚಯವನ್ನು ಇಂಗ್ಲಿಷ್ ಓದುಗರಿಗೆ ಮಾಡಿಕೊಟ್ಟರು. ಹೈದರಾಬಾದಿನ ಸ್ವಾಮಿ ಗೋವಿಂದತೀರ್ಥರು ಉಮರನ ಮೂಲಕೃತಿಯನ್ನು ಪೂರ್ಣವಾಗಿ ಅನುವಾದಮಾಡಿ ಒಂದು ಅಧಿಕೃತ ಗ್ರಂಥವನ್ನು ಕೊಟ್ಟಿದ್ದಾರೆ. ಇವರ ಪ್ರಯತ್ನದಿಂದ ಉಮರನ ಸುತ್ತ ಕವಿದಿದ್ದ ಕಾರ್ಮೋಡ ಸ್ವಲ್ಪ ಚದುರಲು ಅವಕಾಶವಾಗಿದೆ.

ಉಮರನ ರುಬಾಯಿಯಾತ್ ೪೨ ಭಾಷೆಗಳಿಗೆ ಅನುವಾದವಾಗಿದೆ. ಭಾರತದ ಪ್ರಾಂತ್ಯಭಾಷೆಗಳಲ್ಲಿ ಎರಡುನೂರುಸಲ ಪ್ರಸಿದ್ಧ ಕವಿಗಳಿಂದ ಅನುವಾದವಾಗಿದೆ. ಕನ್ನಡದಲ್ಲಿ ಫಿಟ್ಸ್‌ಜೆರಲ್ಡನ ಕೃತಿಯನ್ನು ಡಿ. ವಿ. ಗುಂಡಪ್ಪನವರೂ, ಮಂಜೇಶ್ವರದ ಗೋವಿಂದಪೈಗಳವರೂ ಅನುವಾದ ಮಾಡಿದ್ದಾರೆ. ಡಿ. ವಿ. ಗುಂಡಪ್ಪನವರು ತಮ್ಮ 'ಉಮರನ ಒಸಗೆ' ಗ್ರಂಥದ ಎರಡನೆಯ ಮುದ್ರಣದಲ್ಲಿ ಉಮರನ ೮೫ ಮೂಲ ರುಬಾಯಿಗಳನ್ನು ಅನುವಾದ ಮಾಡಿದ್ದಾರೆ. ಅ. ನ. ಕೃ ಅವರು ಇದಕ್ಕೆ ಮುಂಚೆ ಮೂಲ ೫೧ ರುಬಾಯಿಗಳನ್ನು ಅನುವಾದಮಾಡಿ 'ರಸಋಷಿ' ಕಾವ್ಯ ಸಂಗ್ರಹದಲ್ಲಿ ಪ್ರಕಟಮಾಡಿದ್ದರು.

ಉಮರನ ಜೀವನಚರಿತ್ರೆಯ ಬಗ್ಗೆ ಹೆಚ್ಚು ಅಂಶಗಳು ತಿಳಿಯ ಬಂದಿಲ್ಲ. ಸಮಕಾಲೀನರಲ್ಲಿಯೇ ಅವನ ವಿಷಯದಲ್ಲಿ ಭಿನ್ನಾಭಿಪ್ರಾಯ ವಿದ್ದುದರಿಂದ ಅವರು ಕಟ್ಟಿದ ಕಥೆಗಳ ಪ್ರಾಮಾಣಿಕತೆಯನ್ನು ನಿರ್ಧರಿಸುವುದು ಕಷ್ಟವಾಗಿದೆ. ಕ್ರಿ. ಶ. ೧೦೧೫ ರಲ್ಲಿ ಉಮರ್ ಖೊರಾಸ್ಸಾನ್ ಪ್ರಾಂತ್ಯದ ಸುಂದರ ನೈಷಾಪುರದಲ್ಲಿ ಹುಟ್ಟಿದನೆಂದು ತಿಳಿದು ಬಂದಿದೆ. (ಕ್ರಿ. ಶ. ೧೦೪೮ ರ ಮೇ ತಿಂಗಳು ೧೮, ಉಮರನ ಜನ್ಮದಿನವೆಂದು ಸ್ವಾಮಿ ಗೋವಿಂದತೀರ್ಥರು ಅಭಿಪ್ರಾಯ ಪಡುತ್ತಾರೆ.) ಇವನು ೧೦೮ ವರ್ಷ ಬದುಕಿದ್ದಂತೆ ನಂಬಿಕೆ. (ಉಮರನ ಜೀವಿತಕಾಲ ೭೪ ವರ್ಷವೆಂದು ಸ್ವಾಮಿ ಗೋವಿಂದತೀರ್ಥರ ನಿರ್ಣಯ.)

ಉಮರನ ಪೂರ್ವಜರು ಗುಡಾರಮಾಡುತ್ತಿದ್ದುದರಿಂದ ಖಯ್ಯಾಂ ಎಂಬ ಉಪನಾಮಧೇಯ ಅವನ ಹೆಸರಿನೊಂದಿಗೆ ಬಂದಿದೆ. ಪೂರ್ವಜರು ದೀನವೃತ್ತಿಯವರೆಂದು ಉಮರ್ ನಾಚಿಕೆಪಟ್ಟುಕೊಂಡಿಲ್ಲ. ಆ ಬಗ್ಗೆ

ಅಭಿಮಾನದಿಂದ ನುಡಿದಿದ್ದಾನೆ.* ಉಮರ್ ತನ್ನ ೧೭ ನೆಯ ವಯಸ್ಸಿನಲ್ಲಿ ಅಬು ಹಮೀದ್ ನಾಸಿರುದ್ದೀನ್ ಮಹಮದ್ ಮನ್‌ಸೂರ್ ಎಂಬ ಪ್ರಸಿದ್ಧ ವಿದ್ವಾಂಸನಲ್ಲಿ ಶಿಕ್ಷಣಕ್ಕೆ ನಿಂತ. ಬಾಲ್ಯದ ದಿನಗಳನ್ನು ಬಾಲ್ಖ್‌ನಲ್ಲಿ ಕಳೆದಂತೆ ತಿಳಿದು ಬರುತ್ತದೆ. ಉಮರನಿಗೆ ೧೮ ನೆಯ ವಯಸ್ಸಿನಲ್ಲಿ ಪಿತೃವಿಯೋಗವಾಯಿತು. ಜೀವನೋಪಾಯ ಹುಡುಕುವ ಹವ್ಯಾಸದಲ್ಲಿ ಅವನ ವಿದ್ಯಾವ್ಯಾಸಂಗ ಕುಂಠಿತವಾಯಿತು. ಆ ವೇಳೆಗಾಗಲೇ ಬೀಜಗಣಿತ, ಕ್ಷೇತ್ರಗಣಿತಗಳ ಮೇಲೆ ಎರಡು ಗ್ರಂಥಗಳನ್ನು ಬರೆದು ಸಾಮರ್‌ಖಂಡದ ಅಬುತಾಹಿರ್ ಎಂಬ ಪ್ರಸಿದ್ಧ ಪಂಡಿತನ ಗಮನವನ್ನು ಸೆಳೆದಿದ್ದ. ಅಬುತಾಹಿರ್ ಉಮರನಿಗೆ ಆಶ್ರಯ ಪ್ರೋತ್ಸಾಹವಿತ್ತು ಅವನ ವ್ಯಾಸಂಗ ಮುಂದುವರಿಯಲು ನೆರವಾದ. ಅಬುತಾಹಿರ್ ಉಮರನನ್ನು ಬುಖಾರಾದ ದೊರೆ ಷಂಸುಲ್ ಮುಲ್ಕನಿಗೆ ಪರಿಚಯ ಮಾಡಿಕೊಟ್ಟ. ಷಂಸುಲ್‌ಮುಲ್ಕ್ ಉಮರನನ್ನು ಸುಲ್ತಾನ್ ಮಲ್ಲಿಕ್‌ಷಾನಿಗೆ ಪರಿಚಯಮಾಡಿಕೊಟ್ಟ. ತನ್ನ ೨೬ ನೆಯ ವಯಸ್ಸಿಗೇ ಉಮರನಿಗೆ ಇಸ್ಪಹಾನಿನ ಖಗೋಳ ಸಮೀಕ್ಷಾ ಮಂದಿರದ (Observatory) ನಿರ್ದೇಶನ ಲಭಿಸಿತು.

ಉಮರನ ವೈಜ್ಞಾನಿಕ ಖ್ಯಾತಿ ಬಹು ಬೇಗನೆ ಹರಡಲಾರಂಭಿಸಿತು. ವೈಜ್ಞಾನಿಕ ಪರಿಶ್ರಮದೊಡನೆ ಉಮರ್ ಪವಿತ್ರ ಖುರಾನಿನ ಬಗ್ಗೆ ಪಾಂಡಿತ್ಯ, ಇತಿಹಾಸ ಭಾಷೆಗಳ ಬಗ್ಗೆ ಪಾಂಡಿತ್ಯ, ಯಂತ್ರವಿದ್ಯೆ ಹಾಗೂ ಮೃಣ್ಮೂರ್ತಿ ರಚನೆಯಲ್ಲಿ ಪ್ರಾವೀಣ್ಯತೆಯನ್ನು ದೊರಕಿಸಿಕೊಂಡಿದ್ದ. ಅವನ ಪ್ರತಿಭೆಯನ್ನು ಗೌರವಿಸಿ ಮಲ್ಲಿಕ್‌ಷಾ ಅವನನ್ನು ತನ್ನ ಆಸ್ಥಾನದ ಹಾಗೂ ಸಂಸಾರದ ಮಹಾವೈದ್ಯನನ್ನಾಗಿ ನೇಮಿಸಿದ. ಉಮರನ ಸ್ವತಂತ್ರ ವಿಚಾರ ಧೋರಣೆಯಿಂದ ಅವನಿಗೆ ಹೆಚ್ಚುಮಂದಿ ಶಿಷ್ಯರಿದ್ದಂತೆ ಕಂಡುಬರುವುದಿಲ್ಲ.

---

* "Khayyam who stitched the tents of Science,
Has fallen in grief's furnace and been suddenly burned ;
The shears of fate have cut the tent ropes of his life,
And the broken of Hope has sold him for nothing !"

ಮೂವತ್ತನೆಯ ವಯಸ್ಸಿನಲ್ಲಿ ಉಮರನಲ್ಲಿ ಆಧ್ಯಾತ್ಮ ಪ್ರವೃತ್ತಿ ನೊಳೆತ ಹಾಗೆ ಕಂಡುಬರುತ್ತದೆ. ಅವನು ಅವಿಸೆನ್ನನ ಉಪದೇಶವನ್ನು ಅನುವಾದ ಮಾಡಿದ್ದಲ್ಲದೆ ಅರಾಬಿಕ್ ಭಾಷೆಯಲ್ಲಿ ಕ್ಲಿಷ್ಟ ದಾರ್ಶನಿಕ ವಿಷಯಗಳ ಮೇಲೆ ಕೆಲವು ಪ್ರಬಂಧಗಳನ್ನೂ ರಚಿಸಿದ.

ಮಲ್ಲಿಕ್‌ಷಾನ ಮಂತ್ರಿ ನಿಜಾಮ್ ಉಲ್‌ಮುಲ್ಕ್ ಉಮರನ ಪರಮ ಮಿತ್ರನೂ ಹಿತೈಷಿಯೂ ಆಗಿದ್ದ. ಆದರೆ ರಾಣಿ ತುರ್ಕನ್ ಖಾಟೂನಳಿಗೆ ಉಮರನನ್ನು ಕಂಡರಾಗದು. ಮಲ್ಲಿಕ್‌ಷಾ ತೀರಿಕೊಂಡಮೇಲೆ ಆಸ್ಥಾನದಲ್ಲಿ ಉಮರನ ಪ್ರಾಧಾನ್ಯ ಕುಂದುತ್ತ ಬಂತು. ನಿಜಾಮ್ ಉಲ್‌ಮುಲ್ಕನ ಮಗ ಫಖಿರ್ ಉಲ್‌ಮುಲ್ಕ್‌ನಿಗಾಗಿ ಉಮರ್ ಒಂದು ದರ್ಶನ ಗ್ರಂಥವನ್ನು ಬರೆದು ಅದರಲ್ಲಿ ಸೂಫಿ ತತ್ತ್ವಕ್ಕೆ ಪ್ರಾಧಾನ್ಯಕೊಟ್ಟಿದ್ದಾನೆ. ' ಸಂಪ್ರದಾಯ ಪ್ರಿಯರಾದ ಮುತಾಕಲ್ಲಮೀನರಿಗೂ ಸೂಫಿಗಳಿಗೂ ತೀವ್ರ ಭಿನ್ನಾಭಿಪ್ರಾಯ ಗಳಿದ್ದವು. ಉಮರ್ ಸೂಫಿ ಪಂಥಕ್ಕೆ ಒಲವು ತೋರಿ ಸಂಪ್ರದಾಯ ಪ್ರಿಯರನ್ನು ಹಲವು ಪದ್ಯಗಳಲ್ಲಿ ಅಣಕವಾಡಲು ಅವರು ಅವನ ಮೇಲೆ ಕೆರಳಿನಿಂತರು. ಅವನ ಮಿತ್ರರು ಶತ್ರುಗಳಾದರು. ಉಮರ್ ಬರೆವಣಿಗೆ ಯನ್ನು ಬೇಸತ್ತು ನಿಲ್ಲಿಸಿಬಿಟ್ಟ. ಅವನ ಪ್ರಾಣಾಪಹರಣದ ಹಲವು ಪ್ರಯತ್ನ ಗಳಾದವು. ರಾಜಧಾನಿಯ ವಾತಾವರಣಕ್ಕೆ ಬೇಸತ್ತು ಉಮರ್ ಹಜ್‌ಗೆ ಯಾತ್ರಾರ್ಥಿಯಾಗಿ ಹೊರಟುಬಿಟ್ಟ. ಯಾತ್ರೆ ಮುಗಿಸಿಕೊಂಡು ಹಿಂದಿರುಗಿದ ಮೇಲೆ ಸಾರ್ವಜನಿಕ ಜೀವನದಿಂದ ವಿರಮಿಸಿ ಏಕಾಂತವಾಸಮಾಡ ಲಾರಂಭಿಸಿದ.

ಸಾಯುವ ಕೊನೆಯ ದಿನದವರೆಗೂ ಉಮರ್ ಆರೋಗ್ಯವಾಗಿ ದೃಢ ಕಾಯನಾಗಿದ್ದ. ಅವನ ಕೊನೆಯ ದಿನದ ಬೆಳಿಗ್ಗೆ ಅವಿಸೆನ್ನನ ಗ್ರಂಥ ಓದುತ್ತಿದ್ದ. 'ಒಂದು ಮತ್ತು ಹಲವು' ಅಧ್ಯಾಯಕ್ಕೆ ಬಂದಾಗ ತನ್ನ ಹಲ್ಲುಕಡ್ಡಿಯನ್ನು ಅದರಲ್ಲಿಟ್ಟು ಮುಚ್ಚಿ ದೈವಸಂಪನ್ನರನ್ನು ಬರಮಾಡಿ ಕೊಂಡು ತನ್ನ ಸಮಸ್ತ ಆಸ್ತಿಯನ್ನೂ ಅವರಿಗೆ ಹಂಚಿಕೊಟ್ಟ ಅಂದೆಲ್ಲ ನಿರಸನ ವ್ರತ ಮಾಡಿ ರಾತ್ರಿ ಭಕ್ತಿಪೂರ್ವಕವಾಗಿ ಪ್ರಾರ್ಥನೆ ಸಲ್ಲಿಸಿ ತನ್ನ ಅಂತಿಮ ಶಾಂತಿಗೆ ತೆರಳಿಬಿಟ್ಟ. ಅವನ ಬಾಳಿನಂತೆ ಅವನ ಸಾವೂ ಶುಭ್ರವೂ ಶಾಂತಿ ಪೂರ್ಣವೂ ನಿರಾಡಂಬರವೂ ಆಗಿತ್ತು.

ಉಮರನ ಜೀವನದ ಸುತ್ತ ಅನೇಕ ಸ್ವಾರಸ್ಯವಾದ ಕಥೆಗಳು ಕೂಡಿಕೊಂಡಿವೆ. ಅವುಗಳ ಯಥಾರ್ಥತೆಯನ್ನು ವಿದ್ವಾಂಸರು ಒಪ್ಪುವುದಿಲ್ಲವಾದರೂ, ಉಮರನ ಬಗ್ಗೆ ಸಮಕಾಲೀನ ಅಭಿಪ್ರಾಯ, ದ್ವೇಷ, ಅಭಿಮಾನಗಳು ಹೇಗಿದ್ದವೆಂದು ಆ ಕಥೆಗಳಿಂದ ತಿಳಿಯಬಹುದು.

೧. ನೈಷಾಪುರದಲ್ಲಿ ಒಂದು ಶಾಲೆಯ ಜೀರ್ಣೋದ್ಧಾರ ಕೆಲಸ ನಡೆದಿತ್ತು. ಇಟ್ಟಿಗೆಗಳನ್ನು ಹೊರಲು ಕತ್ತೆಗಳನ್ನು ಉಪಯೋಗಿಸುತ್ತಿದ್ದರು. ಒಂದು ಕತ್ತೆ ಭಾರ ಹೊರಲಾರದೆ ನಿಂತುಬಿಟ್ಟಿತಂತೆ. ಉಮರ್ ಅದರ ಬಳಿಹೋಗಿ

"ಹೋಗಿದ್ದ ನೀಂ ಬಂದು ಮತ್ತೆ ತಪ್ಪುತಲಿರುವೆ.
ನಿನ್ನ ಹೆಸರಳಿಸಿಹುದು ಜನರ ನೆನಪಿಂದೆ
ನಿನ್ನಂದಿನುಗುರೀಗ ಕಾಲುಗೊರಸಾಗಿಹುದು
ನಿನ್ನಯಾ ದಾಡಿ ಬಾಲದಲಿ ಹೊರಟಿಹುದು." †

ಎಂದು ಹೇಳಲು ಕತ್ತೆ ಚೇತರಿಸಿಕೊಂಡು ಮುಂದಕ್ಕೆ ಅಡಿಯಿಟ್ಟಿತಂತೆ. ಅಲ್ಲಿದ್ದವರು ಇದರ ಕಾರಣವೇನೆಂದು ಕೇಳಲು ಉಮರ್ ಹೇಳಿದ 'ಈ ಕತ್ತೆ ಪೂರ್ವಜನ್ಮದಲ್ಲಿ ಇಲ್ಲಿ ವಾಸಿಸುತ್ತಿದ್ದ ಒಬ್ಬ ಉಪಾಧ್ಯಾಯನಾಗಿತ್ತು. ಉಪಾಧ್ಯಾಯ ವೃತ್ತಿಯಲ್ಲಿ ಮುಂದುವರಿಯದಿರಲು ಅವನಿಗೆ ಕತ್ತೆಯ ಜನ್ಮ ಪ್ರಾಪ್ತವಾಯಿತು. ನಾಚಿಕೆಯಿಂದ ಮುಂದಡಿಯಿಡಲಿಲ್ಲ. ಗೆಳೆಯನ ಧೈರ್ಯದ ಮಾತು ಕೇಳಿ ಮುಂದಡಿಯಿಟ್ಟಿತು.

೨. ಇಮಾಂ ಘಸಲಿ ದರ್ಶನದ ಮೇಲೆ ಒಂದು ಗ್ರಂಥ ಬರೆಯಲು ನಿರ್ಧರಿಸಿ ಉಮರನ ಸಹಾಯ ಕೇಳಿದನಂತೆ. ಪುರಸತ್ತಿಲ್ಲವೆಂದು ಉಮರ್ ಸತಾಯಿಸಲು ಘಸಲಿ ಸೂರ್ಯೋದಯ ಸಮಯದಲ್ಲಿ ಪ್ರಮತ್ತ ಸ್ಥಿತಿಯಲ್ಲಿ ಉಮರ್ ಆಡುವ ಕೆಲವು ಮಾತುಗಳನ್ನು ಗುರುತುಮಾಡಿಕೊಂಡು ತನ್ನ ಗ್ರಂಥ ಮುಗಿಸಲು ನಿರ್ಧರಿಸಿ ಅದಕ್ಕೆ ಉಮರನನ್ನು ಒಪ್ಪಿಸಿದ. ಹೀಗೆ ೧೨ ವರ್ಷ ಸಾಗಿತು. ಘಸಲಿ ತನ್ನ ಗ್ರಂಥ ಮುಗಿಸಿ ಮಾಷ್‌ಹದ್ದಿಗೆ ಹೊರಟುಬಿಟ್ಟ.

---

† ಈ ಪದ್ಯದ ಅನುವಾದ ಶ್ರೀ ಡಿ. ವಿ. ಗುಂಡಪ್ಪನವರದು.

ಅಲ್ಲಿ ತಾನೇ ಗ್ರಂಥವನ್ನು ಸ್ವತಂತ್ರವಾಗಿ ರಚಿಸಿರುವುದಾಗಿ ಸಾರಿದ. ಇದನ್ನು ಕೇಳಿ ಕುಪಿತನಾದ ಉಮರ್ ಒಬ್ಬ ಆಳನ್ನು ಕಳುಹಿಸಿ ಫಸಲಿ ಇಳಿದಿದ್ದ ಮನೆಯ ಮೇಲೆ ನಿಂತು ತಮಟೆ ಬಾರಿಸಿ 'ಫಸಲಿ ಉಮರನ ಶಿಷ್ಯ'ನೆಂದು ಸಾರಿಸಿ ಈ ಪದ್ಯ ಹೇಳಿಸಿದ

"ಈ ಚಕ್ರ ಕುರಿತೆಂಥ ಹುಲು ಅಭಿಪ್ರಾಯ!
ಗಭೀರ ಸಾಗರದ ಆಳವನು ಅಳೆಯುವರು
ನಡೆಯಿಂದ ಮೂಢಜನ!
ಕಾಲನ ತೆರೆಯೊಳಗೆ ಇಣಿಕಿನೋಡಲು ಅನುವಿಲ್ಲದಾಗ
ಜಾತಕ ಬರೆದು ಸುಖವಾಗಿ ನಿದ್ರಿಪರು!"

೩. ಉಮರ್ ಬುಖಾರಾಗೆ ಹೋದನಂತೆ. ಕೆಲವು ದಿವಸ ಕಳೆದು ಅಲ್ಲಿನ ಒಬ್ಬ ಮಹಾಪುರುಷನ ಸಮಾಧಿಯ ಬಳಿ ಹೋದಾಗ ಭಾವನಾಪರ ವಶನಾದ. ಹನ್ನೆರಡು ಹಗಲಿರುಳು ಈ ಪದ್ಯ ಕೇಳಿಕೊಂಡು ಓಡಿಯಾಡಿದ ನಂತೆ.

"ನಿನ್ನ ಪಾದಸೇವೆ ಮಾಡಲು ನನ್ನ ನಾನು ಸವೆಸಲಿಲ್ಲ.
ನಿನ್ನ ಹಾದಿ ಶುಚಿಮಾಡಲು ನನ್ನ ಹುಬ್ಬಿನಿಂದ
ಧೂಳು ಹೊಡೆಯಲಿಲ್ಲ.
ಆದರೂ ನಿನ್ನ ಬಾಗಿಲಿಂದ ನಾನು ನಿರಾಶನಾಗಿ
ಹಿಂದಿರುಗಲಿಲ್ಲ.
ಕಾರಣವಿಷ್ಟೇ - ನಾನೆಂದೂ ಒಂದನ್ನು ಎರಡೆಂದು
ಸುಳ್ಳಾಡಿದವನಲ್ಲ."

೪. ನಿಜಾಮಿ ಬಾಖ್ ಪಟ್ಟಣಕ್ಕೆ ಹೋಗಿ ತನ್ನ ಗುರುವಾದ ಉಮರ ನನ್ನು ಕಂಡು ಮುಖ್ಯಾಯಾತ್ರೆ ಮಾಡಲು ಅಪ್ಪಣೆ ಬೇಡಿದನಂತೆ. ಅದಕ್ಕೆ ಉಮರ್ 'ನೀನು ಹಿಂದಿರುಗಿದ ಮೇಲೆ ಉತ್ತರದ ಗಾಳಿ ಹೂವೆರಚುವೆಡೆ ನನ್ನ ಸಮಾಧಿ ಕಾಣುವೆ' ಎಂದು ಹೇಳಿದನಂತೆ. ನಿಜಾಮಿ ಮೂರು ವರ್ಷಗಳಾನಂತರ ಹಿಂದಿರುಗಿ ಗುರು ಹೇಳಿದ್ದ ಕಡೆ, ಹೂವಿನ ರಾಶಿಯ ಮಧ್ಯೆ ಸಮಾಧಿಯಿದ್ದುದನ್ನು ಕಂಡು ಆಶ್ಚರ್ಯಚಕಿತನಾದನಂತೆ.

೫. ಒಂದು ದಿನ ಉಮರ್ ಪಾನಗೋಷ್ಠಿಯಲ್ಲಿ ವೈಮರೆತಿದ್ದಾಗ ಅಕಸ್ಮಾತ್ತಾಗಿ ಕಳ್ಳುಕುಡಿಕೆ ಒಡೆದುಹೋಗಲು ಉಮರ್ ಕುಪಿತನಾಗಿ ಈ ಪದ್ಯ ಹೇಳಿದನಂತೆ.

"ನೀನೆಂತು ಅವಚಿತವಾಗಿ ನನ್ನ ಕುಡಿಕೆ ಒಡೆದೆ, ಎಲೆದೇವಾ,
ಎಲ್ಲ ಸುಖದಿಂದ ನನ್ನ ಬಾಳನ್ನು ಹೊರದೂಡಿದೆ.
ಬಾಳಿನ ಅವನತಿಯೊಂದಿಗೆ ನನ್ನ ಜೀವನದ ಆಶೆಯನ್ನೊಗೆದೆ
ನಾನು ಧೂಳಭಕ್ಷಿಸುವೆ - ಆದರೆ ಕುಡುಕನಾರು
ಎಲೆ ದೇವಾ."

ಈ ದೈವನಿಂದೆಗೆ ಪ್ರತೀಕಾರರೂಪವಾಗಿ ಉಮರನ ಮುಖ ಕಪ್ಪಿಟ್ಟಿತಂತೆ. ಉಮರ್ ಒಂದು ಕನ್ನಡಿ ತರಿಸಿ ತನ್ನ ಮೋರೆ ಕಪ್ಪಾಗಿದ್ದುದನ್ನು ಕಂಡು ವಿಷಾದದಿಂದ

"ಮರ್ತ್ಯದಲ್ಲಿ ಪಾಪರಹಿತ ಒಬ್ಬನುಂಟೀ?
ಇಲ್ಲಿದ್ದೂ ಪಾಪಗಳಿಸದೆ ಹೋಗುವುದೆಂತು?
ಪಾಪಮಾಡಿ ನಾನು ಪತಿತನಾಗುವೆ, ಆದರೆ ನಿನ್ನ
ಕಾರುಣ್ಯಕ್ಕೆ ಪತನವುಂಟೀ?
ನಾನು ಸದೋಷಿ, ಆದರೆ ನಿನ್ನ ಕಟಾಕ್ಷವೂ ಅಂತೆಯೇ?"

ಎಂದು ಹೇಳಲು ದೇವರು ಕನಿಕರಿಸಿ ಉಮರನ ಮುಖ ಮೊದಲಿನ ವರ್ಣ ತಳೆಯುವಂತೆ ಅನುಗ್ರಹಿಸಿದನಂತೆ.

೬. ಒಮ್ಮೆ ವಜೀರ್ ಅಬ್ದುರ್ ರಜಾಕನ ಮನೆಯಲ್ಲಿ ಒಂದು ವಿದ್ವದ್ಗೋಷ್ಠಿ ಸೇರಿತ್ತು. ಖುರಾನಿನ ಪ್ರಸಿದ್ಧ ವಿದ್ವಾಂಸನಾದ ಅಬುಹಸನ್ ಘಸಲಿಯೂ ಅಲ್ಲಿದ್ದ. ಕುರ್ಾನಿನ ಯಾವದೋ ಒಂದು ಭಾಗದ ಮೇಲೆ ಭಿನ್ನಾಭಿಪ್ರಾಯ ಹುಟ್ಟಿ ಚರ್ಚೆಯಾಗುತ್ತಿತ್ತು. ಉಮರ್ ಬರಲು ರಜಾಕ್ 'ಅಗೋ ಮಹಾಪಂಡಿತ ಬಂತಿದ್ದಾನೆ' ಎಂದು ಹೇಳಿದ. ವಾದಗ್ರಸ್ತ ವಿಷಯವನ್ನು ಉಮರನ ಗಮನಕ್ಕೆ ತರಲು ಅವನು ಏಳು ಪಾಠಗಳನ್ನು ನಿರ್ದೇಶಿಸಿ ಅವುಗಳನ್ನೆಲ್ಲಾ ಸಮಂಜಸವಾಗಿ ವ್ಯಾಖ್ಯಾನಮಾಡಿ ತನಗೆ ಒಪ್ಪಿಗೆಯಾದ

ಪಾಠವನ್ನು ಸೂಚಿಸಿದನಂತೆ. ರಜಾಕ್ ಬೆರಗಾಗಿ 'ಈ ವಿದ್ವತ್ತು ಕುರಾನಿನ ವಿಶಿಷ್ಟ ಪಂಡಿತರಿಗೂ ಲಭ್ಯವಿಲ್ಲ' ಎಂದು ಹೇಳಿದನಂತೆ.

೭. ದೊರೆ ಬೇಟೆಗೆ ಹೊರಡಲು ತಕ್ಕ ಮುಹೂರ್ತ ನಿಶ್ಚಯಿಸಿ ಕೊಂಡು ಬರುವಂತೆ ತನ್ನ ಸೇವಕನೊಬ್ಬನಿಗೆ ತಿಳಿಸಿದ. ಉಮರ್ ಒಂದು ಮುಹೂರ್ತ ನಿಶ್ಚಯಿಸಿ ಹೇಳಿದ. ಆ ಮುಹೂರ್ತದಲ್ಲಿ ದೊರೆ ಬೇಟೆಗೆ ಹೊರಟು ಒಂದೆರಡು ಮೈಲಿ ಪ್ರಯಾಣಮಾಡಿರಲು ಕಾರ್ಮೋಡ ಕವಿದು ಮಳೆ ಬರುವ ಸೂಚನೆ ಕಂಡುಬಂತು. ಪರಿವಾರದವರು ಉಮರನ ಜ್ಯೋತಿಷ್ಯ ನೋಡಿ ನಕ್ಕರು. ದೊರೆ ಹಿಂದಿರುಗಬೇಕೆಂದು ಯೋಚಿಸುತ್ತಿರುವಲ್ಲಿ ಉಮರ್ 'ಸ್ವಲ್ಪ ತಡೆಯಿರಿ' ಎಂದು ಹೇಳಿದ. ಸ್ವಲ್ಪ ಹೊತ್ತಿನೊಳಗಾಗಿ ಮೋಡಗಳು ಚೆದುರಿ ಆಕಾಶ ಶುಭ್ರವಾಯಿತು. ನಕ್ಕವರು ತಲೆತಗ್ಗಿಸ ಬೇಕಾಯಿತು.

೮. ಉಮರ್ ಬಾಲ್ಯದಲ್ಲಿ ಇಮಾಂ ಮೋವಾಫಾಕನಲ್ಲಿ ಅಭ್ಯಾಸ ಮಾಡುತ್ತಿದ್ದಾಗ ಹಸನ್‌ಬಿನ್ ಆಲಿ ಮತ್ತು ಹಸನ್ ಸಬ್ಬಾ ಅವನ ಸಹಪಾಠಿ ಗಳಾಗಿದ್ದರು. ಮೂವರು ಗೆಳೆಯರು ತಮ್ಮಲ್ಲಿ ಯಾರಾದರೂ ಮುಂದೆ ಉಚ್ಛ್ರಾಯ ಸ್ಥಿತಿಗೆ ಬಂದರೆ ಉಳಿದಿಬ್ಬರಿಗೆ ಸಹಾಯಮಾಡಬೇಕೆಂದು ಕರಾರು ಮಾಡಿಕೊಂಡರು. ಹಸನ್‌ಬಿನ್ ಆಲಿ ಸೆಲ್‌ಜುಕ್ ದೊರೆಯ ವಜೀರನಾಗಿ ನಿಜಾಮ್ ಉಲ್‌ಮುಲ್ಕ್ ಎಂದು ಪ್ರಸಿದ್ಧನಾದ. ಅವನ ಉಚ್ಛ್ರಾಯ ಸ್ಥಿತಿಯನ್ನು ಕಂಡು ಉಮರ್ ಅವನ ಬಳಿಗೆ ಹೋಗಿ ಹಿಂದಿನ ಕರಾರನ್ನು ನೆನಪಿಸಲು ನಿಜಾಮ್ ಉಲ್‌ಮುಲ್ಕ್ ಉಮರನಿಗೆ ನಿಷಾಪುರದ ಗೌರ್ನರ್ ಪದವಿಕೊಡಲೊಪ್ಪಿದ. ಉಮರ್ ಪದವಿಬೇಡವೆಂದು ಹೇಳಿ ವರ್ಷಕ್ಕೆ ೧೨೦೦ ವರಹಗಳ ಆದಾಯವುಳ್ಳ ಒಂದು ಜಾಗೀರಿಯನ್ನು ಸ್ವೀಕರಿಸಿದ.

ಮೂರನೆಯವನಾದ ಹಸನ್‌ಸಬ್ಬಾನೂ ನಿಜಾಮ್ ಉಲ್‌ಮುಲ್ಕನಲ್ಲಿ ಸಹಾಯಾರ್ಥಿಯಾಗಿ ಬಂದ. ಅವನಿಗೂ ಒಂದು ಗೌರ್ನರ್ ಪದವಿಯನ್ನು ನಿಜಾಮ್ ಉಲ್‌ಮುಲ್ಕ್ ನೀಡಿದ. ನಿಜಾಮು ಅವನಿಗೆ ವಜೀರ ಪದವಿಯನ್ನೇ ಕೊಟ್ಟ. ಕೃತಘ್ನನಾದ ಸಬ್ಬಾ ತನ್ನ ಗೆಳೆಯನ ವಿರುದ್ಧ ಸಂಚುಮಾಡಿ ಅವನನ್ನು ಕೊಲೆಮಾಡಿಸಿಬಿಟ್ಟ.

ಈ ಕಥೆಗಳ ಐತಿಹಾಸಿಕ ಪ್ರಾಮಾಣ್ಯವೇನೇ ಇರಲಿ ಉಮರ್ ಪ್ರಸಿದ್ಧ ದಾರ್ಶನಿಕನೆಂದೂ, ವಿಜ್ಞಾನಿಯೆಂದೂ, ಸರಳಜೀವಿಯೆಂದೂ ವ್ಯಕ್ತವಾಗುತ್ತದೆ.

ಉಮರನ ಸಂಸಾರದ ಬಗ್ಗೆ ಪ್ರಮಾಣಬದ್ಧವಾದ ಸಂಗತಿಗಳು ತಿಳಿಯ ಬಂದಿಲ್ಲ. ಉಮರ್ ಧರ್ಮಶೀಲನಾದುದರಿಂದ ಪವಿತ್ರ ಖುರಾನಿನ ಆದೇಶದಂತೆ ವಿವಾಹವಾಗಿದ್ದನೆಂದೂ ಅವನಿಗೆ ಮಕ್ಕಳಿದ್ದರೆಂದೂ ಕೆಲವರು ಊಹಿಸುತ್ತಾರೆ. ಉಮರನಿಗೆ ವಿವಾಹವೇ ಆಗಿರಲಿಲ್ಲವೆನ್ನುವುದಕ್ಕೆ ಅವನ ಪದ್ಯಗಳಿಂದ ಸಾಕಷ್ಟು ಆಧಾರಗಳು ದೊರೆಯುತ್ತವೆ.

ಉಮರನ ಬಗ್ಗೆ ತಿಳಿದುಬಂದಿರುವ ಈ ವಿಷಯಗಳಿಂದ ಅವನಿಗೆ ಸಮಕಾಲೀನ ಕವಿಗಣದಲ್ಲಿ ಹಿರಿಯಸ್ಥಾನವಿದ್ದಂತೆ ಕಂಡುಬರುವುದಿಲ್ಲ. ಸಾದಿ, ಹಾಫೀಜರಂತೆ ಕಾವ್ಯಸೃಷ್ಟಿಯೇ ಅವನ ಜೀವನದ ಹೆಗ್ಗುರಿಯಾಗಿದ್ದಂತೆ ಕಂಡುಬರುವುದಿಲ್ಲ. ಅವನ ಪದ್ಯಗಳು ಸಮಯ, ಸನ್ನಿವೇಶವನ್ನನುಸರಿಸಿ ಹುಟ್ಟಿಕೊಂಡ ವಿಚಾರ ತರಂಗಗಳು. ಅವುಗಳಲ್ಲಿ ಕೆಲವನ್ನು ಉಮರ್ ಬರೆದಿರಬಹುದು; ಕೆಲವನ್ನು ಕಂಡು ಕೇಳಿದವರು ಗುರುತು ಹಾಕಿಟ್ಟಿರಬಹುದು. ಕನ್ನಡದ ಸರ್ವಜ್ಞ, ತೆಲುಗಿನ ವೇಮನ, ಹಿಂದಿಯ ಕಬೀರರ ಕಾವ್ಯ ಇಂದು ನಮ್ಮ ಕೈಸೇರಿರುವಂತೆ ಉಮರನ ಕೃತಿಗಳೂ ಸಂಗ್ರಹಗೊಂಡು ನಮ್ಮ ಕೈಸೇರಿವೆ.

ಉಮರನ ಕಾವ್ಯಾದರ್ಶವನ್ನು ಅರಿತುಕೊಳ್ಳಬೇಕಾದರೆ ಅವನ ಧರ್ಮದೃಷ್ಟಿಯ ಬಗ್ಗೆ ಖಚಿತವಾದ ಅಭಿಪ್ರಾಯವನ್ನು ಓದುಗರು ತಳೆಯಬೇಕಾದುದು ಅನಿವಾರ್ಯ. ಉಮರ್ ಸೂಫಿಯಾಗಿದ್ದನೇ ಇಲ್ಲವೇ ಎನ್ನುವುದು ಒಂದು ದೊಡ್ಡ ಸಮಸ್ಯೆ. ಸೂಫಿ ದರ್ಶನಕ್ಕೆ ಉಮರನ ಸಂಬಂಧವಿದ್ದುದು ಸ್ಥಿರಪಟ್ಟರೆ ಅವನ ರುಬಾಯಿಗಳ ಅರ್ಥ ಸಾಂಕೇತಿಕವಾಗುತ್ತದೆ. ಅವನು ಸೂಫಿಯಾಗಿರದಿದ್ದ ಪಕ್ಷಕ್ಕೆ ಫಿಟ್ಸ್‌ಜೆರಲ್ಡನ ಭಾವಾನುವಾದ ಅಕ್ಷರಶಃ ಸತ್ಯವಾಗುತ್ತದೆ.

---

೩

ಉಮರ್ ಸೂಫಿಯಾಗಿದ್ದನೇ ಇಲ್ಲವೇ ಎನ್ನುವುದು ವಾದಗ್ರಸ್ತ ವಿಷಯ. ಆ ಬಗ್ಗೆ ವಿಶೇಷ ಚರ್ಚೆಯಾಗಿ ಪಂಡಿತರು ವಿವಿಧ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ. ಉಮರನ ಕಾವ್ಯವನ್ನು ವಿಮರ್ಶಿಸುವಾಗ ಅವನ ಧರ್ಮದೃಷ್ಟಿಗೆ ಇಷ್ಟೊಂದು ಪ್ರಾಧಾನ್ಯಕೊಡಬೇಕೇ? ಅವನ ಧರ್ಮ ವೈಯಕ್ತಿಕವೆಂದು ಭಾವಿಸಿ ಕಾವ್ಯವಿಮರ್ಶೆಯನ್ನೇ ಲಕ್ಷಿಸಬಾರದೇಕೆ? ಎಂಬ ಪ್ರಶ್ನೆ ಸಹಜವಾಗಿ ಏಳುತ್ತದೆ. ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಧರ್ಮ, ಸಾಹಿತ್ಯ, ಕಲೆ, ರಾಜಕಾರಣಗಳನ್ನು ಪ್ರತ್ಯೇಕ ವಿಷಯಗಳೆಂದು ಪರಿಗಣಿಸುವಂತೆ ಪ್ರಾಚ್ಯ ರಾಷ್ಟ್ರಗಳಲ್ಲಿ ಪರಿಗಣಿಸುವುದಿಲ್ಲ. ಪ್ರಾಚ್ಯರಾಷ್ಟ್ರಗಳಲ್ಲಿ ಸಾಹಿತ್ಯ, ಧರ್ಮ, ಕಲೆ, ರಾಜಕಾರಣ ಮತ್ತು ಮಾನವ ಜೀವನ ವಿಕಾಸಕ್ಕೆ ಅಗತ್ಯವಾದ ಎಲ್ಲ ವಿಷಯಗಳೂ ಹಾಸುಹೊಕ್ಕಾಗಿವೆ. ಧರ್ಮ ಎಲ್ಲದರ ಮೂಲಾಧಾರವಾಗಿದ್ದು ಅದರ ಮಾನದಂಡದಿಂದಲೇ ಇತರ ವಿಷಯುಗಳ ಯುಕ್ತಾಯುಕ್ತತೆಯನ್ನಳೆಯುವ ಸಂಪ್ರದಾಯ ಬೆಳೆದುಬಂದಿದೆ. ಪ್ರಾಚ್ಯರಾಷ್ಟ್ರಗಳ ಕವಿಗಳಲ್ಲಿ ಗಣನೀಯನಾದ ಉಮರನ ಬಗ್ಗೆ ಈ ಮಾತು ಹೆಚ್ಚು ಸಿಷ್ಟವಾಗಿ ಅನ್ವಯಿಸುತ್ತದೆ. ಉಮರ್ ಸೂಫಿ ಎಂದು ಒಪ್ಪಿಕೊಳ್ಳದಿದ್ದರೆ ಅವನು ಉಪಯೋಗಿಸಿರುವ ಸಂಕೇತ, ಉಪಮೆಗಳಿಗೆ ಲೌಕಿಕಾರ್ಥವನ್ನು ಕಲ್ಪಿಸಿ, ಅವನು ವಿಷಯೋಪಭೋಗವನ್ನು ಎತ್ತಿಹಿಡಿದ ಚಾರ್ವಾಕನೆಂದು ನಿರ್ಧರಿಸಬೇಕಾಗುತ್ತದೆ; ಅವನು ಸೂಫಿ ಎಂದು ಒಪ್ಪಿಕೊಂಡರೆ ಭೋಗದೃಷ್ಟವಾದ ಅವನ ಉಪಮೆಗಳ ಹಿಂದಣ ತಾತ್ತ್ವಿಕ ಗುಣವನ್ನರಸಬೇಕಾಗುತ್ತದೆ. ಕವಿಯನ್ನು ಅವನ ಕಾವ್ಯವನ್ನು ಪ್ರತ್ಯೇಕಿಸುವುದು ಹೇಗೆ ದುಸ್ಸಾಧ್ಯವೋ ಹಾಗೆ ಕವಿಯನ್ನೂ ಅವನ ಧರ್ಮವನ್ನೂ ಇಂಗಡಿಸಲು ಸಾಧ್ಯವಿಲ್ಲ.

ಈ ವಿಷಯವನ್ನು ವಿಮರ್ಶಿಸುತ್ತಾ ಶ್ರೀ ಡಿ. ವಿ. ಗುಂಡಪ್ಪನವರು * ಹೀಗೆ ಅಭಿಪ್ರಾಯಪಡುತ್ತಾರೆ.

---

* ಉಮರನ ಒಸಗೆ (ದ್ವಿತೀಯ ಮುದ್ರಣ—೧೯೪೪)—ಪುಟ ೭೦.

"ಸೂಫಿ ಪಂಥಿಗಳಲ್ಲಿ ಕೆಲವರು ಉಮರನು ತಮ್ಮ ತತ್ತ್ವಬೋಧಕರಲ್ಲೊಬ್ಬನೆಂದೂ ಆತನ ನಿಜವಾದ ಉದ್ದೇಶವು ಕಾವ್ಯದ ಮಾತುಗಳಿಂದ 'ಪ್ರತ್ಯಕ್ಷವಾಗಿ ತೋರಿಬರುವ ಅರ್ಥವಲ್ಲವೆಂದೂ ಒಂದು ಸಂಕೇತ ಕ್ರಮದಿಂದ ತಮ್ಮ ಸಿದ್ಧಾಂತವನ್ನು ನಿರೂಪಿಸಿರುವುದೇ ಈ ಕವಿಯ ವಿಶೇಷ ಚಾತುರ್ಯವೆಂದೂ ಹೇಳುತ್ತಾರೆ........ವಿರಕ್ತಿಯನ್ನಭ್ಯಾಸಮಾಡಿ, ಅಂತರ್ಮುಖಿಯಾಗಿ, ಆತ್ಮಾನುಸಂಧಾನದ ಮೂಲಕ ಭಗವದನುಭವವನ್ನು ಸಂಪಾದಿಸಿಕೊಳ್ಳಬಹುದೆಂದು ಸೂಫಿಯ ಮತ. ಮದ್ಯವೆಂದರೆ ಭಗವದುಪಾಸನೆಯ ಆನಂದ; ಬಟ್ಟಲೆಂದರೆ ಮನುಷ್ಯಹೃದಯ; ಅರವಟಿಗೆಯೆಂದರೆ ಸೂಫಿಯೋಗಿಗಳ ಗೋಷ್ಠಿ; ಗಂಧರ್ವನೆಂದರೆ ದೇವರನ್ನು ಸಾಕ್ಷಾತ್ಕಾರ ಮಾಡಿಕೊಂಡಿರುವವನು – ಈ ರೀತಿ ಸಂಜ್ಞೆಗಳನ್ನರಿತುಕೊಂಡು ಓದಿದರೆ ತೋರಿಬರುವ ಗೂಢಾರ್ಥವೇ ಉಮರನ ಅಂತರಂಗವೆಂದೂ, ಮೇಲೆ ಮೇಲೆ ಕಾಣುವ ಸ್ಪಷ್ಟಾರ್ಥವು ಒಂದು ವ್ಯಾಜ ನಟನೆಯೆಂದೂ ಸೂಫಿಗಳು ವಾದಿಸುತ್ತಾರೆ.

"ಹೀಗೆ ಲೋಕಕ್ಕೆ 'ಪ್ರಿಯ'ವಾಗಿರುವ ಸುಖಸಾಧನ ಸ್ಮರಣೆಯ ಮೂಲಕ ಲೋಕಕ್ಕೆ 'ಹಿತ'ವಾಗುವ ತತ್ತ್ವಗಳನ್ನು ಮಹಾಕವಿಗಳು ಬೋಧಿಸುತ್ತಾರೆಂಬ ಅಭಿಪ್ರಾಯ ನಮ್ಮ ದೇಶದಲ್ಲಿಯೂ ಉಂಟು........ಈ ಬಗೆಯ ವ್ಯಾಖ್ಯಾನವು ಭಕ್ತಿ ಚಮತ್ಕಾರಗಳುಳ್ಳುದೇನೋ ಹೌದು. ಆದರೆ ಅದಕ್ಕೆ ಅವಶ್ಯವಾಗುವ ಬಲಾತ್ಕಾರದ ಶಬ್ದಾನ್ವಯಗಳನ್ನು ಅತಿಯುಕ್ತಿಗಳನ್ನೂ ನೋಡಿದರೆ, ಅದು ಕವಿಯ ನಿಜವಾದ ಹೃದಯವನ್ನು ತೋರಿಸುತ್ತದೆ ಎಂದು ನಂಬಿಕೆ ಹುಟ್ಟುವುದು ಕಷ್ಟ. ಕಾವ್ಯದಿಂದ ಸಹಜವಾಗಿ, ಸ್ಪಷ್ಟವಾಗಿ, ಸುಲಭವಾಗಿ ದೊರೆಯುವ ಅರ್ಥವು ಹೃದ್ಯವೂ ಗಂಭೀರವೂ ಆಗಿರುವಲ್ಲಿ, ಅದು ಕವಿಯ ಮನಸ್ಸಿನಲ್ಲಿದ್ದುದೇ ಅಲ್ಲವೆಂದು ವಾದಿಸುವುದು ಸಾಹಸವೇ ಸರಿ. ಪ್ರಕಾಶವಾಗಿ ಭೋಗವನ್ನೂ ರಹಸ್ಯವಾಗಿ ವಿರಾಗವನ್ನೂ ಬೋಧಿಸುವುದರ ಪ್ರಯೋಜನವಾದರೂ ಏನು? ಒಳ್ಳೆಯ ಕಾವ್ಯ ಮತಗ್ರಂಥವಾಗಿರಬೇಕೆಂಬ ನಿಯಮ ಕಾವ್ಯ ಶಾಸ್ತ್ರದಲ್ಲಿಯೂ ಇಲ್ಲ, ಧರ್ಮಶಾಸ್ತ್ರದಲ್ಲಿಯೂ ಇಲ್ಲ. ಚಿತ್ತ ವಿಕಾಸವನ್ನುಂಟಾಗಿಸಿ, ಅದರ ಮೂಲಕ ಅಪ್ರತ್ಯಕ್ಷವಾಗಿ ಆತ್ಮಸಂಸ್ಕಾರಕ್ಕೆ ದಾರಿ ಮಾಡಿಸುವುದು ಕಾವ್ಯದ ಕೆಲಸ. ಸ್ಪಷ್ಟಾರ್ಥವೇ

ಆ ಕೆಲಸವನ್ನು ಮಾಡಿಸುತ್ತಿರುವಾಗ ಗೂಡಾರ್ಥವನ್ನು ಹುಡುಕುವ ಕ್ಲೇಶಕ್ಕೆ-ಅದೊಂದು ಬಗೆಯ ಕಸರತ್ತೆಂಬುದೊಂದಲ್ಲದೆ, - ಬೇರೆ ಫಲ ಕಾಣುವುದಿಲ್ಲ."

ಉಮರನ ಮೇಲೆ ಸುದೀರ್ಘ ಕಾವ್ಯವಿಮರ್ಶೆ ಬರೆದಿರುವ ಮೌಲಾನಾ ಷಿಬ್ಲಿ ಸಾಹೇಬರು ಅವನನ್ನು ಸೂಫಿ ಪಂಥಕ್ಕೆ ಸೇರಿಸಲೊಪ್ಪುವುದಿಲ್ಲ." ಅವನು ವಿದ್ಯಾವಂತ, ದಾರ್ಶನಿಕ ಆದರೆ ಸೂಫಿಯಲ್ಲ. ಸೂಫಿಯಾಗಿದ್ದರೆ ಅವನ ಮಧ್ಯ ಹಾಫೀಸನ ಮದ್ಯದಂತೆ ದೈವಜ್ಞಾನದ ಸಂಕೇತವಾಗಿರುತ್ತಿತ್ತು ಎಂದು ಅವರು ಅಭಿಪ್ರಾಯ ಪಡುತ್ತಾರೆ. ಉಮರ ಪಾನಾಸಕ್ತನಾಗಿದ್ದ ಮತ್ತು ಆ ಆಸಕ್ತಿಯನ್ನು ಮುಚ್ಚುಮರೆಯಿಲ್ಲದೆ ಪ್ರದರ್ಶಿಸುತ್ತಿದ್ದನೆಂಬುದು ಷಿಬ್ಲಿಯವರ ಅಭಿಪ್ರಾಯ. ಮಾ. ನಿಕ್ಲಾಸ್, ಜೆರಾರ್ಡ್, ಸಕಲಾತವಾಲಾ, ವಿನ್‌ಫೀಲ್ಡ್, ನಿಕಲ್‌ಸನ್ ಮೊದಲಾದ ವಿದ್ವಾಂಸರು ಅವನು ಸೂಫಿಯೆಂದು ದೃಢವಾಗಿ ನಂಬುತ್ತಾರೆ. ಅವನು ಸೂಫಿಯಾಗಿದ್ದನೆನ್ನುವುದಕ್ಕೆ ಕೆಲವು ಪ್ರಬಲವಾದ ಆಧಾರಗಳು ದೊರೆಯುತ್ತವೆ.

೧) ಉಮರನ ಜನನಕ್ಕೆ ಮುಂಚೆ ಪರ್ಶಿಯಾದೇಶದಲ್ಲಿ ಸೂಫಿ ಧರ್ಮ ಪ್ರಚಾರಕ್ಕೆ ಬಂದಿತ್ತು. ಇಬ್ರಾಹಿಂ ಅದಾಮ್ (೭೭೭) ಮಾರೂಫ್ ಖಾರ್ಕಿ (೮೧೫) ಬಾಗ್ದಾದಿನ ಜುನಾಯಿದ್ (೯೧೦) ಬಾಗ್ದಾದಿನ ಷಿಬ್ಲಿ (೯೪೫) ಮನ್‌ಸೂರ್ ಹಲ್ಲಾಜ್ (೯೨೨) ಇವರೆಲ್ಲಾ ಪ್ರಸಿದ್ಧರಾದ ಸೂಫಿ ದಾರ್ಶನಿಕ ಕವಿಗಳಾಗಿದ್ದರು. ಉಮರನ ಜನನಕಾಲದಲ್ಲಿ ಪರ್ಶಿಯ ದೇಶದಲ್ಲಿ ಸೂಫಿ ಸಿದ್ಧಾಂತಿಗಳಾಗಿದ್ದ ಇಬನ್‌ಸಿನಾ, ನಾಸಿರ್ ಖುಸ್ರೋ, ಅಬುಸೈಯದ್, ಅಬ್ದುಲ್ಲಾ ಅನ್ಸಾರಿಯವರ ಉಪದೇಶಗಳು ಮನೆಮಾತುಗಳಾಗಿದ್ದವು. ಈ ವಾತಾವರಣದಲ್ಲಿ ಹುಟ್ಟಿ ಬೆಳೆದ ಉಮರ್ ಅವರ ಉಪದೇಶಸರಣಿಯನ್ನು ಅನುಸರಿಸಿರಬೇಕು.

೨) ಸೂಫಿ ಗೋಷ್ಠಿಗಳಲ್ಲಿ ಉಮರನ ಕಾವ್ಯವನ್ನು ಪ್ರಮಾಣ ಗ್ರಂಥಗಳಲ್ಲಿ ಒಂದೆಂದು ಪರಿಗಣಿಸಲಾಗಿತ್ತು. ಸೂಫಿ ತತ್ತ್ವಾರ್ಥದ ಉದಾರ ಭಾವನೆಗೆ ವಿರೋಧವಾಗಿದ್ದ ಕಟುಧರ್ಮಿಗಳು ಉಮರನನ್ನು 'ಫಿಲ್‌ಸೂಫ್' (ಗ್ರೀಕ್ ದರ್ಶನದ ಅನುಯಾಯಿ) ಎಂದು ತೆಗಳುತ್ತಿದ್ದರು. ಅವರ ತೆಗಳಿಕೆಗೆ ಉತ್ತರ ರೂಪವಾಗಿ ಉಮರ್ ಹೀಗೆ ಹೇಳಿದ್ದಾನೆ

''ಶತ್ರುಗಳೆನ್ನ ಫಿಲ್‌ಸೂಫನೆಂದು ಕರೆಯುತ್ತಾರೆ.
ದೇವಾ: ಅವರೆನ್ನ ಮೂದಲಿಸುವರೆಂಬುದ ನೀ ಬಲ್ಲೆ.
ನಿನ್ನ ಪ್ರೇಮಮಂದಿರವನ್ನು ನಾನು ಹೊಕ್ಕ ಮೇಲೆ
ನಾನು ಯಾರೆಂಬುದನರಿಯೆ; ನಾನು ನಿನ್ನವನು.''

೩) ಸುಲ್ತಾನ್ ಮಲ್ಲಿಕ್‌ನ (೧೯೨) ತರುವಾಯ ಆಸ್ಥಾನದಲ್ಲಿ ಉಮರನಿಗೆ ಸ್ಥಾನವಿಲ್ಲದೆ ಹೋಯಿತು. ರಾಣಿ ಖಾಟೊನಳಿಗಾಗಲಿ, ಸುಲ್ತಾನ ಸಂಜಾರನಿಗಾಗಲಿ ಅವನು ಬೇಕಾದವನಾಗಿರಲಿಲ್ಲ. ನಿಜಾಮ್ ಉಲ್‌ಮುಲ್ಕನ ಮಗನಾದ ಫಖರ್ ಉಲ್‌ಮುಲ್ಕ್ ಅವನನ್ನು ಉಳಿಸಿಕೊಂಡು ಪ್ರೋತ್ಸಾಹಕೊಡುತ್ತಿದ್ದ. ಅವನಿಗಾಗಿ ಉಮರ 'ಕುಲಿಯತೀವಜೂದ್' ಎಂಬ ದರ್ಶನಗ್ರಂಥವನ್ನು ಬರೆದು ಅದರಲ್ಲಿ ಮತಾಕಲ್ಲಮೀನ್ (ಸಂಪ್ರದಾಯಪ್ರಿಯರು), ಹಕೀಮರು (ದಾರ್ಶನಿಕರು), ತಾಲೀಮಿಗಳು ಇಸ್ಮಾಯಿಲ್ಲರು), ಇವರೆಲ್ಲರಿಗಿಂತ ಸೂಫಿಗಳು ಯೋಗ್ಯರೆಂದು ಹೇಳಿದ್ದಾನೆ.

೪) ಸಂಪ್ರದಾಯಮಾರ್ಗಕ್ಕೆ ವಿರುದ್ಧವಾಗಿದ್ದುದರಿಂದ ಉಮರನ ಕಾವ್ಯ, ದರ್ಶನಗ್ರಂಥಗಳು ಜನಸಾಮಾನ್ಯಕ್ಕೆ ಪ್ರಿಯವಾಗಲಿಲ್ಲ. ಆದರೆ ಸೂಫಿ ಪಂಥಗಳು ಅವುಗಳನ್ನು ಬಹಳ ಗೌರವದಿಂದ ಕಂಡು ತಮ್ಮ ಗೋಷ್ಠಿಗಳಲ್ಲಿ ಚರ್ಚಿಸುತ್ತಿದ್ದರು. ಈ ಬಗ್ಗೆ ಉಮರನೇ ಹೇಳುತ್ತಾನೆ

"ಎಲ್ಲದರ ಮೇಲೆ ಆಳುವ ಅನುಭಾವಿಗಳು ದೃಷ್ಟಾರರು.
ದೇವನಿಲಯದಲ್ಲಿ ಅವರು ಕುಡಿಯುವಾಗ ನನ್ನ
ಸ್ಮರಿಸಿಕೊಳ್ಳುತ್ತಾರೆ.
ಸಂಪ್ರದಾಯಭಕ್ತರು ತಮ್ಮ ವ್ಯಾಪಾರಧರ್ಮವನ್ನು
ನನ್ನಿಂದ ಕಲಿಯಬೇಕು.
ಕಲಿತು ಗೆಲಿಲಿಯಲ್ಲಿ ಪ್ರಯೋಗಿಸಬೇಕು.''

ಖಿಷ್ತಿ ಹೇಳುವಂತೆ ಪ್ರಸಿದ್ಧ ಸೂಫಿಯಾದ ಹಕೀಂ ಸನಾಯ್ (೧೧೩೧) ಅಬು ಹಾಮಿದ್ ಬಿನ್ ಮನ್‌ಸೂರನ ಶಿಷ್ಯನಾಗಿದ್ದ. ತಬ್ರೀಜಿಯ ಮಾತಿನಂತೆ ಉಮರ್ ಮನಸೂರನ ಬಳಿ ಕೆಲಕಾಲ ಶಿಕ್ಷಣ ಪಡೆದಿದ್ದ.

ಸನಾಯ್ ಮತ್ತು ಉಮರ್ ಇಬ್ಬರೂ ಒಬ್ಬನೇ ಗುರುವಿನ ಶಿಷ್ಯರಾಗಿದ್ದರು. ಸನಾಯ್ ಒಂದು ಫೆಸಲಿನಲ್ಲಿ

"ಫರೂಕಿ ಪದ್ಯಗಳು ಸ್ಮೃತಿ ತಪ್ಪಿಸುತ್ತವೆ.
ಬುಲ್ ಫುತೂಹನ ಪದ್ಯಗಳು ಕುಣಿಸುತ್ತವೆ"

ಎಂದು ಹೇಳುತ್ತಾನೆ. ಬುಲ್ ಫುತೂಹ ಎಂಬುದು ಉಮರನ ಪರ್ಯಾಯ ನಾಮ.

೪) ಬಯಾಜಿದ್ ಬುಸ್ತಾಮಿಯನ್ನು ಉದ್ಧರಿಸುತ್ತಾ ದಾರಾಷುಕೊ ತನ್ನ 'ಪಟೂಹತ್' ಗ್ರಂಥದಲ್ಲಿ ಹೀಗೆ ಹೇಳುತ್ತಾನೆ.

"ಜ್ಞಾನಮದ್ಯದ ಬೀಜ ಆದಾಮನ ಕಾಲದಲ್ಲೇ ಹುಟ್ಟಿಹಾಕಲ್ಪಟ್ಟಿತು, ನೋಏನ ಕಾಲದಲ್ಲಿ ಅದು ಕುಡಿಯೊಡೆಯಿತು, ಅಬ್ರಹಾಮನ ಕಾಲದಲ್ಲಿ ಅದು ಹೂವಾಯಿತು, ಮೋಸಸ್ಸನ ಕಾಲದಲ್ಲಿ ಹಣ್ಣಾಗಿ ದ್ರಾಕ್ಷಿಯಾಯಿತು, ಮಹಮದ್ ಮುಸ್ತಾಫಾನ (ಅವನ ಆತ್ಮಕ್ಕೆ ಶಾಂತಿಯಿರಲಿ) ಕಾಲಕ್ಕೆ ಅದು ಶುದ್ಧ ಮಧುವಾಯಿತು. ಅವನ ಪಂಥವನ್ನನುಸರಿಸುವ ವಿಲಾಸಿಗಳು ಮದ್ಯವನ್ನು ಜಾಡಿ ಜಾಡಿ ಕುಡಿದು ತಮ್ಮ ಅಹಂಭಾವವನ್ನು ನೀಗಿಕೊಂಡಿದ್ದಾರೆ."

ಮದ್ಯವನ್ನು ಸಾಂಕೇತಿಕವಾಗಿ ಉಪಯೋಗಿಸುವ ಪರಿಪಾಠ ಉಮರನಿಗೆ ಬಹುಕಾಲಕ್ಕೆ ಮುಂಚೆಯೇ ಬಂದುದು ವೇದ್ಯವಾಗುತ್ತದೆ.

೫) ಉಮರನ ಬಗ್ಗೆ ವಿಶೇಷ ಆಸ್ಥೆವಹಿಸಿ ಒಂದು ಪ್ರಮಾಣ ಗ್ರಂಥ ಬರೆದಿರುವ ವಿನ್‌ಫೀಲ್ಡರ ಅಭಿಪ್ರಾಯವಿದು :

"ಅವನ ಚೌಪದಿಗಳಲ್ಲಿ ವಿಜ್ಞಾನದ ಪರಿಮಿತಿಯನ್ನು ನಿರ್ದೇಶಿಸಿ ಅನಂತತೆಯನ್ನು ಅದು ಅಳೆಯಲಾರದ ಅಸಮರ್ಥತೆಯನ್ನು ಸೂಚಿಸುವ ಭಾವ ಹಲವು ಸಲ ವ್ಯಕ್ತವಾಗಿದೆ. ಉಮರನನ್ನು ಪ್ರಪಂಚವಾದಿಯೆಂದು ಕರೆಯುವುದು ಶುದ್ಧ ಅವಿವೇಕ. ಉಮರನ ವಿರೋಧವೆಲ್ಲಾ ಧರ್ಮದ ಮೇಲೆ ಕಟ್ಟಿದ ಕಸರೆಯ ಮೇಲೆ ಹಾಗೂ ಧರ್ಮದ ಅಪಾರ್ಥದ ಮೇಲೆ. ಅಂತರಂಗದೊಳಗೆ ಅವನು ಪರಮ ದೈವವಾದಿಯಾಗಿದ್ದ.

ಧರ್ಮ, ದರ್ಶನ, ವಿಜ್ಞಾನಗಳ ಪ್ರಚಂಡ ಪಂಡಿತನಾದ ಉಮರ್ ಕೇವಲ ಕುಡುಕನಾಗಿ, ನೀತಿರಹಿತ ಜೀವನ ನಡೆಸಿದನೆನ್ನುವುದು ತರ್ಕವಿರುದ್ಧ. ಅವನ ಪದ್ಯಗಳ ಗೂಢಾರ್ಥ ತಿಳಿಯದವರು ಆಡುವ ಮಾತದು. ಅವನು ಕೆಲವು ಸಲ ಪ್ರಯೋಗಿಸುವ ಶಬ್ದಗಳು ಸೂಫಿಧರ್ಮದೊಂದಿಗೆ ಅವನ ಸಂಪೂರ್ಣ ವಿಲೀನತೆಯನ್ನು ವ್ಯಕ್ತಮಾಡುತ್ತವೆ: ಉದಾ: ಸ್ಫೂರ್ತಿಯ ವಿಷಯ, ಭಾವೋದ್ರೇಕ, ಅಂತರಾತ್ಮ ಪರಮಾತ್ಮ ಸಂಯೋಗ ಇತ್ಯಾದಿ."

ಉಮರನು ಸೂಫಿಯೆನ್ನುವುದಕ್ಕೆ ಇಷ್ಟು ಆಧಾರಗಳಿದ್ದರೂ ಅವನೇಕೆ ಎಲ್ಲಿಯೂ ಸ್ಪಷ್ಟವಾಗಿ ಇದನ್ನು ಒಪ್ಪಿಕೊಂಡಿಲ್ಲ ಎನ್ನುವ ಪ್ರಶ್ನೆ ಉಳಿಯುತ್ತದೆ. ಉಮರನ ಜೀವನ ಸುಖಪ್ರಯಾಣವಾಗಿರಲಿಲ್ಲವೆನ್ನುವ ಅಂಶ ಈ ಮೊದಲೇ ತಿಳಿಸಲಾಗಿದೆ. ಸಂಪ್ರದಾಯಪ್ರಿಯರು, ಕಟುಧರ್ಮ ಪ್ರಸಾರಕರು ತುಂಬಿದ್ದ ರಾಜ್ಯದಲ್ಲಿ ಸೂಫಿಯೆಂದುಕೊಂಡು ಬಾಳುವುದು ದುಸ್ತರವಾಗಿತ್ತು. ರೋಮುಕರ ರಾಜ್ಯದಲ್ಲಿ ಕ್ರೈಸ್ತರು ತಲೆಮರಸಿಕೊಂಡು ಬಾಳಿ ಗುಪ್ತವಾಗಿ ತಮ್ಮ ಧರ್ಮವನ್ನಾಚರಿಸುತ್ತಿದ್ದಂತೆ ಸೂಫಿಗಳ ಪರಿಸ್ಥಿತಿಯಾಗಿತ್ತು. ಉಮರನ ಭಾವನೆ, ವಿಚಾರವೆಲ್ಲಾ ಸೂಫಿಮಯವಾಗಿದ್ದರೂ ಅದನ್ನವನು ಸ್ಪಷ್ಟವಾಗಿ ಹೇಳಿಕೊಳ್ಳುವಂತಿರಲಿಲ್ಲ. ತನ್ನ ಪರಿಸ್ಥಿತಿಯನ್ನು ಹಲವು ಪದ್ಯಗಳಲ್ಲಿ ಉಮರ್ ವಿವರಿಸಿದ್ದಾನೆ.

"ನನ್ನ ಪ್ರೇಮಗ್ರಂಥ ತಿಳಿಸಿರುವ ಹಲವು ರಹಸ್ಯಗಳನ್ನು,
ತಲೆಹೋಗುವುದೆಂಬ ಭಯಕ್ಕಾಗಿ ಬಿಚ್ಚಿಡಲಾರೆ,
ಕಲಿಯಲಾರಿಗೂ ಯೋಗ್ಯತೆಯಿಲ್ಲ, ಆಸಕ್ತಿಯೂ ಇಲ್ಲ.
ಇಂತಿರಲು ನನ್ನ ವಿಚಾರ ಪ್ರಕಟವಾಗದಿರುವುದೇ ಒಳ್ಳಿತು."

"ಕೇಳುವ ಗೆಳೆಯನಿಲ್ಲದಿರಲು ನಾನು ಹೇಗೆ ಮಾತನಾಡಲಿ?
ಗೋಳೊಂದೇ ಸನ್ಮಿತ್ರನಂತೆ ನನ್ನ ಸಮೀಪಗತವಾಗಿರುವುದು.
ಕಂಬನಿಧಾರೆ ನನ್ನ ಕಣ್ಣುಗಳಿಂದ ಅಳಿಸಿಲ್ಲ
ಅವನು ಬಂದು, ಗೆಲುವು ತರುವನಕ ನನ್ನ
ಪ್ರಾಣವನ್ನು ಒತ್ತೆಯಿಡುವೆ."

"ನನ್ನ ಸುಲಿಯಲು ಹೀಗಳೆಯುವವರ ಮಾತು
ಕಟ್ಟಿಕೊಂಡೇನು ?
ಸಾವಿರ ಒಡಕು ನುಡಿಯೇಳಬಹುದು. ನನ್ನಲ್ಲಿ ದೋಷವಿಲ್ಲ
ನಾನೊಂದು ಕನ್ನಡಿಯಂತೆ. ನನ್ನೊಳಗೆ ನೋಡುವವನಿಗೆ
ಕಾಣುವುದೇನು – ಒಳ್ಳಿತು ಕೆಟ್ಟಿತು – ಎಲ್ಲಾ ಅವನದೇ."

"ನೀವು ನನ್ನ ತೆಗಳುವಿರಿ. – ನಿಮ್ಮ ಆಘಾತಗಳ ಮರೆತು
ನಾನು ನಿಮ್ಮನ್ನು ವಂದಿಸುವೆ. ನಿಮ್ಮ ನಿಂದೆ ನನಗೆ ಜಾಗೃತಿ-
ನನ್ನ ದೋಷಗಳನ್ನು ಕಂಡು ಒಪ್ಪಿಕೊಂಡು ತಿದ್ದಿಕೊಳ್ಳುವೆ.
ಆದರೆ ನೀವು ದ್ವೇಷಭಂಡಾರ ಕಟ್ಟುತ್ತಿರುವಿರಿ."

ವಿನ್‌ಫೀಲ್ಡ್‌ರವರು ಸೂಚಿಸಿರುವಂತೆ ಹಲವು ಶಾಸ್ತ್ರ, ದರ್ಶನ, ವಿಜ್ಞಾನ ಪ್ರವೀಣನಾದ ಉಮರ್ ಐಹಿಕಭೋಗವನ್ನೇ ಪ್ರತಿಪಾದಿಸುವ ಕಾವ್ಯ ರಚನೆಗೆ ತೊಡಗಿದನೆಂಬ ಮಾತು ಸತ್ಯದ ವಿಪರ್ಯಾಸ. ಉಮರ್ ಸೂಫಿ ದರ್ಶನದಲ್ಲಿ ನಿಷ್ಣಾತನಾಗಿದ್ದುದು ಮಾತ್ರವಲ್ಲದೆ ಗ್ರೀಕರ ನಿಯೋಪ್ಲೆಟಾನಿಕ್ ತತ್ತ್ವಗಳನ್ನೂ, ಅಲ್‌ಫುಸಲಿ, ಅಲ್‌ಮಾರಿಯವರ ಅರಾಬಿಕ್ ತತ್ತ್ವಾರ್ಥ ವನ್ನೂ ಚೆನ್ನಾಗಿ ತಿಳಿದಿದ್ದ. ಹಳೆಯ ಒಡಂಬಡಿಕೆಯ ಜೋಬನ ಗ್ರಂಥ, ಎಕ್ಲಿಸಿಯಾಸ್ಟಸ್, ಸಾಂಗ್ ಆಫ್ ಸಾಂಗ್ಸ್‌ಗಳ ಪರಿಚಯವೂ ಅವನಿಗಿತ್ತು. ಭಾರತೀಯ ದರ್ಶನಗಳನ್ನು ಅರಾಬಿಕ್ ಅನುವಾದಗಳ ಮೂಲಕ ಚೆನ್ನಾಗಿ ಮನನಮಾಡಿಕೊಂಡಿದ್ದ. ಭರ್ತೃಹರಿಯ ಸುಭಾಷಿತಗಳು, ನಾರದ ಭಕ್ತಿ ಸೂತ್ರ ಅವನಮೇಲೆ ವಿಶೇಷ ಪರಿಣಾಮವನ್ನುಂಟುಮಾಡಿದ್ದವು.*

ಸೂಫಿ ದರ್ಶನ ಉಮರನ ಕಾಲಕ್ಕೆ ಬಹಳ ಮುಂಚೆ – ಸುಮಾರು ೭೩೮ ರಲ್ಲಿ ಪ್ರಸಾರಕ್ಕೆ ಬಂದಿತು. ಪವಿತ್ರ ಕುರಾನಿನ ಆಧಾರದ ಮೇಲೇ ಅದು ಸ್ಥಾಪಿತವಾದರೂ ಗ್ರೀಕ್, ಭಾರತೀಯ, ಕ್ರೈಸ್ತ ದರ್ಶನಗಳನ್ನು ನಿರಾಕರಿಸಲಿಲ್ಲ. ಅನುಭಾವವಾದಕ್ಕೆ ಕುರಾನಿನಲ್ಲಿದ್ದ ಗೌಣಸ್ಥಾನವನ್ನು ನಿವಾರಿಸಿ ಅದಕ್ಕೆ ವಿಶೇಷ ಮಹತ್ತ್ವವನ್ನು ಸೂಫಿಗಳು ಕೊಟ್ಟಿರು. ದೇವರನ್ನು

* ಬೌದ್ಧಧರ್ಮದ ಸ್ಥೂಲ ಪರಿಚಯವು ಅವನಿಗಿತ್ತು.

ಕುರಾನ್ ನ್ಯಾಯವಿಮರ್ಶಕನೆಂದು ಪರಿಗಣಿಸಿತು. ಸೂಫಿಗಳು ಅವನನ್ನು ಸೌಂದರ್ಯನಿಧಿ, ಸತ್ಯಭಂಡಾರಿ ಎಂದು ಪರಿಗಣಿಸಿದರು. ಕುರಾನ್ ನಿಷೇಧಿಸಿದ್ದ ಸಂಗೀತ, ನೃತ್ಯಗಳನ್ನು ಸೂಫಿಗಳು ಗೌರವಿಸಿ ಅವುಗಳನ್ನು ಆತ್ಮೋತ್ಕ್ರಾಂತಿಗೆ ಅಳವಡಿಸಿಕೊಳ್ಳುವ ಬಗೆಯನ್ನು ನಿರೂಪಿಸಿದರು.

ಕ್ರಿ. ಶ. ೮೦೧ ರಲ್ಲಿದ್ದ ರಾಬಿಯಾ ಎಂಬ ಕವಿಯಿತ್ರಿಯೂ, ತರುವಾಯದ ಸೂಫಿಗಳೂ ಸಂಕೇತಾರ್ಥವನ್ನು ತಮ್ಮ ಧರ್ಮ ಸಾಹಿತ್ಯದ ಹೆಗ್ಗುರುತು ಮಾಡಿಕೊಂಡರು. ದೇವರನ್ನು ಭೀತಿಯಿಂದ ಅನುಸಂಧಾನ ಮಾಡುವುದಕ್ಕಿಂತ ಪ್ರೀತಿಯಿಂದ ಒಲಿಸಿಕೊಳ್ಳುವುದು ಲೇಸೆನ್ನುವುದೇ ಅವರ ವಿಚಾರವೈಭವ. ಭಾರತವರ್ಷದ ಶೈವ, ವೈಷ್ಣವ ಸಾಹಿತ್ಯಗಳಲ್ಲಿ ಇದೇ ದೃಷ್ಟಿ ಕಂಡುಬರುತ್ತದೆ. ಭಾರತೀಯರು ದೇವರನ್ನು ಗಂಡೆಂದು ಭಾವಿಸಿ ದಂತೆ ಸೂಫಿಗಳು ಹೆಣ್ಣೆಂದು ಭಾವಿಸಿದರು. ಈಶ್ವರ, ಕೃಷ್ಣರ ಬಾಹ್ಯ ಸೌಂದರ್ಯವನ್ನು ಹಿಂದೂ ಕವಿಗಳು ಬಣ್ಣಿಸಿದಂತೆ, ಅಲ್ಲಾನ ಸ್ತ್ರೀರೂಪ, ಸೌಂದರ್ಯವನ್ನು ಸೂಫಿ ಕವಿಗಳು ಬಣ್ಣಿಸಿದ್ದಾರೆ. ಕಾಲಾನುಕ್ರಮದಲ್ಲಿ ಸಂಕೇತ ಬದಲಾಯಿಸಿದ್ದೂ ಉಂಟು. ೧೨ ನೆಯ ಶತಮಾನದವನಾದ ಫರೀದುದ್ದೀನ್ ಅತ್ತರ್ ತನ್ನ 'ಮಂತಕುತಯ್ಯರ್' ಗ್ರಂಥದಲ್ಲಿ ಹಕ್ಕಿಗಳ ಸಾಮ್ಯವನ್ನು ಪಯೋಗಿಸಿ ಆತ್ಮನಯಾತ್ರೆಯನ್ನು ಚಿತ್ರಿಸಿದ್ದಾನೆ.

ಉಮರ್ ಸುಖಲೋಲುಪ, ಚಾರ್ವಾಕಮತವಾದಿ, ಮದ್ಯ ಮೋಹಿನಿ ಯರಲ್ಲಿ ಆಸಕ್ತ ಎಂಬ ಅಭಿಪ್ರಾಯ ಬೆಳೆಯಲು ಫಿಟ್ಜ್‌ಜೆರಲ್ಡನ ಅನುವಾದವೇ ಬಹುಮಟ್ಟಿಗೆ ಕಾರಣ. ಕುರಾನಿಗೆ ಉಮರ್ ಕೊಡುತ್ತಿದ್ದ ವಿವೇಚನಾತ್ಮಕ ವ್ಯಾಖ್ಯಾನ, ಕಟುಧರ್ಮದ ಆಚಾರ ವ್ಯವಹಾರಗಳ ಖಂಡನೆಯಿಂದ ಕುಪಿತರಾದ ಸನಾತನಪಂಥಿಗಳು ಅವನ ಸಂಕೇತಾರ್ಥಕ್ಕೆ ವಿಯುತಾರ್ಥ ಕಲ್ಪಿಸಿ ಅವನ ಕಾವ್ಯವನ್ನು ಕೀಳುವರ್ಗಕ್ಕೆ ಸೇರಿಸಲು ಯತ್ನಿಸಿದರು.

ಉಮರ್ ಕಾವ್ಯ, ದರ್ಶನವನ್ನು ಹಾಲು ಸಕ್ಕರೆಯಂತೆ ಬೆರಸಿ ವಿಹಾರ ದಿಂದ ವಿಕಾಸಕ್ಕೆ ಮಾನವನ ಮನಸ್ಸು ಬೆಳೆಯಬಹುದಾದ ಮಾರ್ಗವನ್ನು ನಿರ್ದೇಶಿಸಿದ. ಅವನ ಕಾವ್ಯ ಸಮಕಾಲೀನ ಕವಿಗಳಿಂದ ಮೊದಲುಗೊಂಡು ಮಹಾಕವಿ ಹಾಫೀಸನವರೆಗೆ ಎಲ್ಲರ ಮೇಲೂ ಪ್ರಭಾವ ಮೂಡಿತು. ಪರ್ಶಿಯನ್ ಸಾಹಿತ್ಯದ ಮೈಲಿಗಲ್ಲುಗಳಂತಿರುವ ರೂಮಿ, ಜಾಮಿ, ಅತ್ತರ್,

ನಿಜಾಮಿ, ಹಾಫೀಸರ ಮೇಲೆ ಅವನ ಬೆಳಕು ಬಿತ್ತರಿಸಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ.

ಉಮರ್ ಸೂಫಿಯಾಗಿದ್ದುದು ಮಾತ್ರವಲ್ಲದೆ ಸೂಫಿ ದರ್ಶನದಲ್ಲಿ ಪಾರಂಗತನೂ ಆಗಿದ್ದ. ಅವನ ಕಾವ್ಯವೆಲ್ಲಾ ಸೂಫಿ ದರ್ಶನಸಾರ. ಅವುಗಳ ಹೊರಗಣ ಚೆಲುವಿಕೆಯೇ ಸಾಕು ಎಂದು ತೃಪ್ತರಾಗಿ ಅವನನ್ನು ಶೃಂಗಾರಕವಿಯೆಂದು ಭಾವಿಸುವವರು ಉಮರ್ ಕಾವ್ಯಸಾಗರದಲ್ಲಿ ಹುದುಗಿರುವ ಅಪರೂಪ್ಯ ರತ್ನರಾಶಿಯನ್ನು ತಾವಾಗಿಯೇ ಜೋಚೆಲ್ಲಿದಂತಾಗುತ್ತದೆ.

---

# ಉಮರನ ಸಾಹಿತ್ಯದಲ್ಲಿ 'ಪ್ರೇಮ'

೩

ಇಸ್ಲಾಂ ದೇವರನ್ನು ನ್ಯಾಯ, ಶಾಂತಿ, ಕರುಣೆಯ ಮೂರ್ತಿಯಾಗಿ ಕಂಡಂತೆ ಪ್ರೇಮಮೂರ್ತಿಯಾಗಿಯೂ ಕಂಡಿದೆ. ಆದರೆ ದೇವರ ಪ್ರೇಮ ಸ್ವರೂಪಕ್ಕೆ ವೈದಿಕರು ಅಷ್ಟು ಪ್ರಾಧಾನ್ಯಕೊಡಲಿಲ್ಲ. ಸೂಫಿ ದರ್ಶನ ಪ್ರಸಾರಕ್ಕೆ ಬಂದಮೇಲೆ ಪ್ರೇಮಭಾವನೆಗೆ ಮಹತ್ತ್ವಬಂದಿತು.

ದೇವರನ್ನು ನೇರವಾಗಿ ಸಂಬೋಧಿಸದೆ ಸಂಕೇತಗಳ ಮೂಲಕ ಸಂಬೋಧಿಸುವುದು ಏಕೆ? ಪ್ರಕಾಶವಾಗಿ ಭೋಗವನ್ನೂ ರಹಸ್ಯವಾಗಿ ವಿರಾಗವನ್ನೂ ಬೋಧಿಸುವುದರ ಪ್ರಯೋಜನವಾದರೂ ಏನು? ಎಂದು ಕೆಲವು ವಿಮರ್ಶಕರು ಕೇಳಿದ್ದಾರೆ.

ಸೂಫಿಗಳು ವೈದಿಕಮಾರ್ಗಾವಲಂಬಿಗಳಾದ ಮುಸ್ಲಿಮರಷ್ಟೇ ದೈವಭಕ್ತಿ ಪರಾಯಣರಾಗಿದ್ದರೂ ಅವರನ್ನು ಸನಾತನಿಗಳು ಮುಸ್ಲಿಮರೆಂದೇ ಪರಿಗಣಿಸುತ್ತಿರಲಿಲ್ಲ. ಕುರಾನಿನ ಉಪದೇಶದ ಒಂದು ಶಾಖೆಯನ್ನು ಸೂಫಿಗಳು ಬೆಳಸಿಕೊಂಡಿದ್ದರೂ ಅವರ ದರ್ಶನವನ್ನು ಸನಾತನಿಗಳು ಇಸ್ಲಾಂ ಧರ್ಮ ತತ್ತ್ವಗಳೆಂದು ಒಪ್ಪಿಕೊಳ್ಳಲಿಲ್ಲ. ತಮ್ಮ ದರ್ಶನಕ್ಕೆ ಒಂದು ಹೊದಿಕೆ ಹೊದೆಸಿ ಅದು ಸನಾತನಿಗಳ ರಕ್ತನೇತ್ರಗಳಿಗೆ ಬೀಳದಂತೆ ಕಾಪಾಡಬೇಕಾಗಿದ್ದ ಆವಶ್ಯಕತೆ ಸೂಫಿಗಳಿಗೊದಗಿತು. ಇದಕ್ಕಿಂತ ಮುಖ್ಯವಾಗಿ ಪರಂಪರೆಯ ಬಲ ಪಡೆಯದ ಒಂದು ಅವ್ಯಕ್ತವಾದ, ಸಿದ್ಧಾಂತವನ್ನು ಅವರು ಮಂಡಿಸುತ್ತಿದ್ದರು. ಅವ್ಯಕ್ತವೂ, ಅನುಭಾವಗೋಚರವೂ ಆದ ತತ್ತ್ವ ಮನವರಿಕೆಯಾಗಬೇಕಾದರೆ ಸಂಕೇತರೂಪವಾದ ಕಾವ್ಯಭಾಷೆ ಅತ್ಯಗತ್ಯವಾಯಿತು.*

---

"....The Sufis adopt the symbolic style becauce there is no other way of interpreting mystical experience. So little does knowledge of the infinite revealed in ecstatic

ಅವರು ಅವಲಂಬಿಸುವ ಸಂಕೇತ ಅವರವರ ದೃಷ್ಟಿ, ಸಂಸ್ಕೃತಿ, ಅಭಿರುಚಿಗಳಿಗೆ ಸಂಬಂಧಿಸಿದ್ದು. ಪ್ರೇಮ ಮಾನವಕೋಟಿಗೆಲ್ಲಾ ಪರಿಚಿತವಾದ ಅನುಭವ ವಾಗಿದ್ದುದರಿಂದ ಹೆಚ್ಚುಮಂದಿ ಅದನ್ನೇ ಅವಲಂಬಿಸಿದ್ದಾರೆ.

ಪ್ರೇಮ, ಸೌಂದರ್ಯ ನಿಧಿ ಹೆಣ್ಣಾದುದರಿಂದ ಸೂಫಿಗಳು ಹೆಣ್ಣನ್ನೇ ದೇವರೆಂದು ಭಾವಿಸಿದರು; ದೇವರನ್ನು ಹೆಣ್ಣೆಂದು ಭಾವಿಸಿದರು. ಆದರೆ ಹೆಣ್ಣಿನ ಸೌಂದರ್ಯ ಲಕ್ಷಣಕ್ಕೆ ಬೇರೆ ಬೇರೆ ತಾತ್ತ್ವಿಕಾರ್ಥ ಕಲ್ಪಿಸಿದರು. ಹೆಣ್ಣಿನ ಚೆಂಗೆನ್ನೆಯ ಮೇಲೆ ಮೂಡುವ ವರ್ಣ ದೇವಾನುಭವದ ಸಾರ ಸರ್ವಸ್ವ; ಕಪ್ಪನೆಯ ಮುಂಗುರುಳು ಮಾಯೆಯ ತೆರೆ; ಮದ್ಯ ದಿವ್ಯಜ್ಞಾನ; ಬಟ್ಟಲೆಂದರೆ ಮಾನವ ಹೃದಯ; ತುಟಿಗಳು ದೈವರಹಸ್ಯದ ಸಂಕೇತ; ಕಪೋಲರೇಖೆ ದೇವಸಿಂಹಾಸನದ ಸುತ್ತಲಿರುವ ದೇವತೆಗಳು ಇತ್ಯಾದಿ. ಈ ಸಂಕೇತಾರ್ಥ ಮದಿರೆಯಿಂದ ಪ್ರೇರಿತವಾಗಿ ಕಾಮದಿಂದ ಕಳೆಗೊಂಡುದೆಂದು ಲಾರೆನ್ಸ್ ಹೌಸ್‌ಮನ್ ಮೊದಲಾದವರು ಅಪಾರ್ಥಮಾಡಿದ್ದಾರೆ. ಸೂಫಿ ದರ್ಶನವನ್ನು ದುರುಪಯೋಗಪಡಿಸಿಕೊಂಡು ಅದನ್ನು ತಮ್ಮ ವಿಷಯಾ ಸಕ್ತಿಯ ತೆರೆಯನ್ನಾಗಿ ಉಪಯೋಗಿಸಿಕೊಂಡವರೂ ಇದ್ದಾರೆ. ಆದರೆ ನಾವು ಒಂದು ದರ್ಶನವನ್ನು ಅಳೆಯಬೇಕಾದುದು ಅದರ ಮೂಲಭೂತ ತತ್ತ್ವಗಳ ಮೇಲಲ್ಲದೆ ಅದಕ್ಕೆ ದೊರೆತ ಅಪಗತಿಯ ಮೇಲಿಂದಲ್ಲ.

---

vision need an artificial disguise that it cannot be communicated at all except through types and emblems drawn from the sensible world, which, imperfect as they are, may suggest and shadow forth a deeper meaning than appear on the surface. 'Gnostics' says Ibn-al-Arabi, 'cannot impart their feelings to other men,' they can only indicate them symbolically to those who have begun to experience the like'."

The Mystics of Islam R. A. Nicholson
—P 103

ಸೂಫಿಗಳ ಪ್ರೇಮ ಕಲ್ಪನೆ ಇಸ್ಲಾಮಿಗೆ ಸ್ವಲ್ಪ ಹೊಸದಾಗಿ ಕಂಡು ಬಂದರೂ ಕ್ರೈಸ್ತ, ಹಿಂದೂಧರ್ಮಗಳಿಗೆ ಹೊಸದಲ್ಲ. 'ಪ್ರೇಮವೇ ದೇವರೆಂದು' ಬೈಬಲ್ ಸಾರಿ ಸಾರಿ ಹೇಳಿದೆ. ಉಪನಿಷತ್ತುಗಳು, ಗೀತೆ, ಭಾಗವತಗಳಲ್ಲಿ ದೇವರನ್ನು ಇನಿಯನೆಂದು ಕಾಣುವ ಅನುಭಾವ ಸ್ಪಷ್ಟವಾಗಿ ಕಂಡುಬಂದಿದೆ.

ಉಮರ್ ಖಯ್ಯಾಂ ಈ ಸಂಪ್ರದಾಯವನ್ನವಲಂಬಿಸಿ ಸೌಂದರ್ಯವನ್ನು ದೇವರೆಂದು ಭಾವಿಸಿದನೋ ಇಲ್ಲವೆ ಅವುಗಳನ್ನು ತನ್ನ ಭೋಗವಸ್ತುವಾಗಿ ಬಳಸಿಕೊಂಡನೋ ಎಂಬುದನ್ನು ಅವನ ರುಬಾಯಿಗಳಿಂದಲೇ ನಾವು ನಿರ್ಧರಿಸಬಹುದು.

ಪ್ರೇಮವರ್ಧನೆಗೆ ಯೌವನ ಉತ್ತಮ ಭೂಮಿ. ಯೌವನ ಮನುಷ್ಯ ಜೀವನದಲ್ಲಿ ಒಂದಪೂರ್ವ ಅವಸ್ಥೆ. ಮನುಷ್ಯ ಸಾಧಿಸಬೇಕೆಂದಿರುವುದನ್ನು ಯೌವನದಲ್ಲಿ ಸಾಧಿಸಬೇಕು

"ಅನುಭಾವಿ ಹಾಡುಗಾರನ್ನೊಬ್ಬ ತೋಟಕ್ಕೆ ಬಂದು
ಗುಲಾಬಿ ಮತ್ತಿತರ ಹೂಗಳ ನಸುನಗುತ ಕಂಡು
ತನು, ಮನ ಸೋತು ಉಸುರಿದ ಎನ್ನ ಮನಕ್ಕೆ
'ಅವನನ್ನು ಈಗಲೇ ದೊರಕಿಸು - ಕಳೆದವೇಳೆ
ಪುನಃ ದೊರೆಯಲಾರದು.' "

ಯೌವನವೇ ಜ್ಞಾನದ ಸಂಕೇತ. ಅದು ಅಳಿದರೆ ಮುಪ್ಪಡಸುವುದು ಖಂಡಿತ. ಚಿರತಾರುಣ್ಯ ಬಯಸುವವರು ಜ್ಞಾನವನ್ನು ಬಿಗಿದಪ್ಪಬೇಕು.

"ಹಿಗ್ಗು! ಅಸ್ತಮಿಸುವ ಚಂದ್ರ ಮತ್ತೆ ಉದಯಿಸುತ್ತಾನೆ.
ಗೀತ ಗಾಯನ ಸಾಲುಸಾಲಾಗಿ ಮುನ್ನಡೆಯುತ್ತವೆ.
ಹಳದಿ ಚಂದ್ರ ವಯಸ್ಸಿನಿಂದ ಬಾಗಿ ತೆಳ್ಳಗಾಗಿದ್ದಾನೆ.
ಮತ್ತೆ ವಿಕಸಿಸುವನು - ಆಗವನಿಗೆ ನೋವೆಂಬುದಿಲ್ಲ."

ಭಕ್ತನ ದೃಷ್ಟಿ ದೇವರಪ್ರೇಮ ದೊರಕಿಸುವುದರ ಕಡೆಗೆ ತಿರುಗಬೇಕು.

''ಉಪವಾಸ, ಪ್ರಾರ್ಥನೆಗಾಗಿ ಎನಿತು ದೂರ
ಮಸೀದಿಗೆ ನಡೆದುಹೋಗುವೆ.
ಅವನ ಬಾಗಿಲು ಬಡಿಯುತ್ತ ನಾನು ನಿಲ್ಲಬೇಕು.
ಖಯ್ಯಾಂ! ಅವನ ಪ್ರೇಮವನ್ನು ದೊರಕಿಸು, ಅದು
ಈ ಮಣ್ಣಿನಿಂದ ಹೂಜಿ, ಮಡಕೆ, ತಟ್ಟೆ
ಬೇಕಾದುದನ್ನು ರೂಪಿಸಬಲ್ಲುದು.''

''ಪ್ರಭುವಿನ ಬೆಳಕಿಗೆ ಪ್ರೇಮದ ಕಣ್ಣನ್ನು ತೆರೆ,
ಆಗಲೇ ಪ್ರೇಕ್ಷಣೀಯ ನೋಟ ನಿನಗೆ ಸಿಗುವುದು.
ಇಂದೇ ಅವನ ಕಟಾಕ್ಷಕ್ಕೆ ಹವಣಿಸು,
ನಾಳೆಗೆಂದು ಮೀಸಲಿಡಬೇಡ.''

''ವಾದದಿಂದ ಸತ್ಯವನ್ನು ದೊರಕಿಸಲಾರೆ.
ನಿನ್ನ ಸಂಪತ್ತನ್ನು ನಿರ್ಗತಿಕರಿಗಿತ್ತೊಡೆಯೂ ದೊರೆಯಲಾರದು,
ಜೀವಮಾನವೆಲ್ಲಾ ಪ್ರೇಮಕ್ಕಾಗಿ ಹಂಬಲಿಸದಿದ್ದರೆ
ಶಬ್ದದ ಅಡಚಣೆ ದಾಟಿ ಪ್ರಭುವಿನ ಬಾಗಿಲು ಮುಟ್ಟಲಾರೆ.''

ಪ್ರಭುವಿನ ಕಟಾಕ್ಷ ಮಹತ್ತ್ವವಾದುದು. ಅದನ್ನು ದೊರಕಿಸಲು ನಾಳೆಗಾಗಿ ಕಾಯಬಾರದು. ಭಕ್ತ ಅದಕ್ಕಾಗಿ ತೊಳಲಿ ಬಳಲಬೇಕು. ಅದು ವಾದದಿಂದ, ದಾನದಿಂದ ದೊರೆಯುವ ವಸ್ತುವಲ್ಲ. ನಿಷ್ಠೆ, ಶ್ರದ್ಧೆ, ಭಕ್ತಿಗಳಿಲ್ಲದೆ ದೈವಾನುಗ್ರಹ ದೊರೆಯಲಾರದು.

ಭಕ್ತ ಪ್ರೇಮಕ್ಕಾಗಿ ಹಂಬಲಿಸಿದರೆ ಸಾಲದು; ಅವನು ಪ್ರೇಮಸ್ವರೂಪನೇ ಆಗಿಬಿಡಬೇಕು. ಪ್ರೇಮೈಕ್ಯವಾದಾಗಲೇ ಪ್ರಭುಸಂದರ್ಶನ.

"ಅಲ್ಲಿಗೆ ನಡೆದರೆನಿತೋ ಮಂದಿ; ಜೂಜಿನಿಂದ
ಯಾರೂ ಹಿಂದಿರುಗಲಿಲ್ಲ,
ಅನಾವೃತ ಮುಖ ನೋಡಿದೆವೆಂದು ಹೇಳಲು
ಯಾರೂ ಮುಂದೆ ಬಾರರು.
ಕರ್ಮದಿಂದಲ್ಲ ಪ್ರೇಮದಿಂದ ಅವನ ಕಟಾಕ್ಷ ಲಭ್ಯ.
ಪ್ರೇಮರಹಿತ ಪ್ರಾರ್ಥನೆ ಸರ್ಕಸ್ ಆಟದಂತೆ ಕ್ಷುಲ್ಲ.''

"ದೀನಸೇವಕರಿಗೆ ಅವನು ದರ್ಶನ ಕರುಣಿಸುವಾಗ
ಅವರೆಲ್ಲವನೂ ಮರೆತು ಅವನನ್ನೇ ಅರಸುವರು,
ಮಾತುಗಾರರಿಗೆ ಅವನು ಕಣ್ಣುಕೊಡುವುದಿಲ್ಲ,
ಕಣ್ಣು ಪಡೆದವರು ಮಾತರಿಯದ ಮೂಕರು."

"ಒಮ್ಮೆ ನೋಟಚೆಲ್ಲಿ ನಿನ್ನ ಆನಂದರೂಪವನ್ನು ತೋರಿಸು
ನಿನ್ನ ಕರುಣೆಯು ಕಣದಮೇಲೆ ನಿಂತಿದೆ ನನ್ನ ಜೀವ.
ನುಡಿಗೆ ನಿಲುಕದ ನಮ್ಮ ಭಾವನೆಗಳು ನಿನ್ನ
ಹೃದ್ಗೋಚರವಾಗಿರುತ್ತವೆ.
ನಿನ್ನ ಪ್ರೇಮ ಅನಂತಾನಂತ ವಿಸ್ತೃತ ಜಗತ್ತನ್ನು
ನಮಗೆ ತೋರಿಸುತ್ತದೆ."

"ನಿನ್ನ ಪ್ರೇಮವೆನ್ನ ಗತಕಾಲದ ಗೆಳೆಯ
ನಿನ್ನ ಪ್ರೇಮವಿಲ್ಲದಂದು ನನಗೆ ಹಬ್ಬವಿಲ್ಲ, ಉಪವಾಸ,
ಪ್ರೇಮಿಗಳು ಜಾತಿ ಮತಗಳನ್ನು ಗಣಿಸರೆಂದು ಹೇಳುತ್ತಾರೆ.
ಪ್ರೇಮವೇ ನನ್ನ ಜಾತಿ, ಮತ, ನಾನಿನ್ನ
ಪ್ರೇಮಿಸುವೆ ಎಲೆ ದೇವಾ!"

ಈ ಪ್ರೇಮ – ಶೃಂಗಾರ ಅಲಂಕಾರದಿಂದ, ವೈಯ್ಯಾರದಿಂದ, ಬರುವುದಿಲ್ಲ. ನಲ್ಲೆ ಹೊರಗಿನ ಸಿಂಗಾರಕ್ಕೆ ಮನಸೋಲುವವಳಲ್ಲ; ಅವಳಿಗೆ ಬೇಕು ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ ಚೆಲುವು.

ದೈವ ಪ್ರೇಮ ಇಂದ್ರಿಯಾತೀತವಾದದ್ದು.

"ಇಂದ್ರಿಯಗಳಿಗೆ ಮನಸೋತು, ವಿಷಯಲಂಪಟನಾದರೆ
ನೀನಾಗುವೆ ಭಿಕಾರಿ, ಚಿತ್ತವಿಟ್ಟು ಲಾಲಿಸು,
ನೀನಾರೆಂದು ನೋಡು, ಎಲ್ಲಿಂದ ಬರುವೆಯೆಂದು ವಿಚಾರಮಾಡು,
ಏನಮಾಡುತ್ತಿರುವೆಯೆಂದು ತಿಳಿ, ನಿನ್ನ ಕೃತಿಗಳು ಎಲ್ಲಿಗೆ
ಒಯ್ಯುವುದೆಂಬುದನ್ನರಿತುಕೋ."

'ನಿನ್ನ ಅಮೌಲ್ಯ ಜೀವನವನ್ನು ನಾಶಮಾಡುವ ಕ್ರಿಮಿಗಳೇ ಇಂದ್ರಿಯಾಸಕ್ತಿ ಎಂದರಿಯೆಯಾ'

"ಪ್ರೇಮಿಗಳಿಗೆ ವಿಷಯಾಸಕ್ತಿ ವಿಷಸದೃಶ,
ಕಾಮತುಂಬಿದ ಎದೆ ಪ್ರೇಮವನ್ನರಿಯಲಾರದು,
ಹದ್ದಿನೊಂದಿಗೆ ಹಾರಲೆಳಸಿದ ಹುಂಜ
ಗೋಡೆಗೆ ತಲೆತಾಗಿಸಿಕೊಂಡು ಮೋರಿಯಲ್ಲಿ ಮಗುಚುವುದು."

ಆಸೆಯಾಮಿಷಗಳ ಇತಿಮಿತಿಯನ್ನು ಕಡೆಹಾಯ್ದ ಪವಿತ್ರಪ್ರೇಮ ಅನ್ಯಾದೃಶವಾದುದು, ಅನುಪಮವಾದುದು. ಅದರ ಯೋಗ್ಯತೆಗೆ ಜಗತ್ತಿನ ಸಕಲ ಭೋಗ ಭಾಗ್ಯಗಳೂ ಸರಿದೂಗಲಾರವು.

"ನಿನ್ನ ಆಶ್ವಾಸನ, ಓ ದಾರಿಕಾರ! ಎನ್ನ ಮನವನ್ನು
ಸಂತಸದಲ್ಲಿ ಮುಳುಗಿಸುವುದು.
ಎಲ್ಲ ಅನುಭಾವವೇದಿಗಳ ಪರಮಗೆಳೆಯಾ,
ನಿನ್ನ ಒಂದು 'ಶಬ್ದ, ಬ್ರಹ್ಮಾಂಡಗಳನ್ನು ಸೃಜಿಸಿದವನ
ವಜ್ರಖಚಿತ ಕಿರೀಟಕ್ಕಿಂತ ಮಿಗಿಲಾದುದು."

ಪ್ರೇಮದ ಹಾದಿಯಲ್ಲಿ ಅಡಿಯಿಟ್ಟು ಭಗವದ್ದರ್ಶನಕ್ಕಾಗಿ ತೊಳಲುವವನ ರೀತಿ, ನೀತಿ, ಆಂಹತಿ ವೇದ, ವಾದ, ದೇವಮಂದಿರಗಳಿಗಿಂತ ಪೂಜ್ಯವಾದುದು.

"ದಿಗಂತಕ್ಕೆ ಹಾರಲೆಳಸುವ ಪ್ರೇಮಿಗಳೊಂದಿಗೆ ಸೆಣಸಬೇಡ,
ಯಾರನ್ನೂ ಘಾತಿಸಬೇಡ, ದುಃಖದಿಂದ ನಿನ್ನನ್ನೇ ಇರಿದುಕೋ,
ಸಾವಿರ ಕಟುಧರ್ಮಿಗಳನ್ನು ವಾದದಲ್ಲಿ ಸೋಲಿಸು,
ಆದರೆ ಪ್ರೇಮಿಯ ಹುಚ್ಚು ಹರಟೆಯನ್ನೂ ಗೌರವಿಸು."

"ಧರ್ಮಶ್ರದ್ಧೆಯಿಂದ ನಾವು ಎರಡು ದೇವಮಂದಿರಗಳಿಗೆ
ಹೋಗುತ್ತೇವೆ.
ಒಂದು ಭೂಮಿಯ ಮೇಲಿರತಕ್ಕದ್ದು; ಇನ್ನೊಂದು
ಹೃದಯಾಂತರ್ಗತ.
ಮಾನವ ಹೃದಯವನ್ನು ಮುಟ್ಟಲೆಳಸು, ಸಾಧ್ಯವಾದರೆ,
ಒಂದು ಹೃದಯ ಸಾವಿರ ದೇವಮಂದಿರಗಳಿಗಿಂತ
ಮಿಗಿಲಾದದ್ದು."

ಉಮರ್ ಹೊರಗಿನ ಆಚಾರ, ವ್ಯವಹಾರ, ಭಕ್ತಿಪ್ರದರ್ಶನಕ್ಕೆ ಗೌಣ ಸ್ಥಾನಕೊಡುತ್ತಾನೆ. ಅವನ ದೃಷ್ಟಿಯಲ್ಲಿ ದೇವಮಂದಿರವಿರುವುದು ಕಲ್ಲು ಮಣ್ಣುಗಳಿಂದ ಕಟ್ಟಿದ ಇಮಾರತಿಯಲ್ಲಲ್ಲ; ಮಾನವ ಹೃದಯದಲ್ಲಿ – ಅಲ್ಲೇ ಪರಮೇಷ್ಠಿ ಪ್ರತಿಷ್ಠಿತನಾಗಿರುವುದು.

ಅನುಭಾವಿ ಇರುವೆಡೆಯೇ ದೇವಮಂದಿರ. ಹಜರತ್ ಪೈಗಂಬರರನ್ನು ಒಮ್ಮೆ ಯಾರೋ ಕೇಳಿದರಂತೆ 'ಗುರುವೇ, ಸಿಕ್ಕಿದೆಡೆಯಲ್ಲಿ, ಅಶುಚಿ ಸ್ಥಳಗಳಲ್ಲಿ ಕೂಡ ನೀವು ಪ್ರಾರ್ಥನೆ ಸಲ್ಲಿಸುವಿರಲ್ಲಾ – ಇದು ನ್ಯಾಯವೇ?' ಎಂದು. ಅದಕ್ಕೆ ಪೈಗಂಬರರು ಹೇಳಿದರು 'ನಾನು ಪ್ರಾರ್ಥನೆ ಸಲ್ಲಿಸವೆಡೆಗಳನ್ನೆಲ್ಲಾ ಪರಮಾತ್ಮ ಮೊದಲೇ ಶುಚಿಮಾಡಿರುತ್ತಾನೆ.' ಉಮರ್ ಹೇಳುತ್ತಾನೆ

"ತಿಳಿದವನಿಗೆ ನಯ ಒರಟು ಎಂಬ ಭೇದವಿಲ್ಲ;
ನಾಕನರಕಗಳೆರಡೂ ಪ್ರೇಮ ಮಂದಿರವಾಗಬಹುದು,
ನಿರ್ಭೀತ ಸೇವಕ ರೇಶ್ಮೆ ಧರಿಸಿರಬಹುದು,
ಗೋಣಿ ಧರಿಸಿರಬಹುದು
ಪ್ರೇಮಿಗಳು ಇಟ್ಟಿಗೆಯ ಮೇಲೋ,ಮೃದುಹಾಸಿನ
ಮೇಲೋ ಒರಗಿರಬಹುದು."

ಪರಮಾತ್ಮನಿಲ್ಲದ ತಾಣವಿಲ್ಲ. ಎಲ್ಲೆಡೆಯಲ್ಲಿಯೂ ಆವಿರ್ಭವಿಸಿರುವ ಪರಮಾತ್ಮನ ಇರವನ್ನು ಅರಿಯುವುದು ಪ್ರೇಮಿಯ ಕೆಲಸ.

ಅನುಭಾವಿಗೆ ಪ್ರೇಮದರ್ಶನವಾಗಿದೆಯೆಂದು ತಿಳಿಯುವುದೆಂತು? ನೇರಳೆಹಣ್ಣು ತಿಂದವನನ್ನು ಗುರುತಿಸುವುದೆಷ್ಟು ಸುಲಭವೋ ಪ್ರೇಮದರ್ಶನ ಪಡೆದವನನ್ನು ಗುರುತಿಸುವುದೂ ಅಷ್ಟೇ ಸುಲಭ.

"ಅನುಗ್ರಹೀತ ಜೀವ, ಅವನ ದಿವ್ಯಸೌಂದರ್ಯವನ್ನು
ಪ್ರತಿಬಿಂಬಿಸುತ್ತದೆ.
ಸಮುತ್ಕ್ರಾಂತಿಗೊಂಡ ಕೊಳಲಿಗೆ ದಿವ್ಯಗಾಯನಾನುಭವವಾಗುವಂತೆ.
ಪ್ರೇಮಸಂವೇದನೆಗೆ ಪ್ರತಿಸ್ಪಂದಿಸದ ಕಟುಧರ್ಮಿಯನ್ನು
ದೂರವಿಡು.
ಅವನು ಸಾವಿರ ಮೈಲಿಯಾಚೆ ಇದ್ದರೇ ಒಳ್ಳಿತು."

''ರಕ್ತದಂತೆ ನರನಾಡಿಗಳಲ್ಲಿ ಪ್ರೇಮ ಎನ್ನ ಹೃದಯ
ಹೊಕ್ಕು ಹರಿದಾಡಿತು,
ಅದು ನನ್ನನ್ನು ಕೊಚ್ಚಿಕೊಂಡು ಹೋಯಿತು.
ನನ್ನ ದೇಹವನ್ನು ಇಡಿಯಾಗಿ ಬಿಡಿಯಾಗಿ ಅದು ವ್ಯಾಪಿಸಿತು.
ನನಗಿರುವುದು ಬರಿ ಹೆಸರು ಮಾತ್ರ, ಅವನೇ ಶಾಶ್ವತನು.''

ಪ್ರೇಮದ ಮಹಾಶಕ್ತಿಗೆ ಸಾಟಿಯಾವುದು ? ಅದು ಏನು ಮಾಡ ಬಲ್ಲುದು ?–ಏನು ಮಾಡಲಾರದು ? ಗೀತಾಯಲ್ಲಿ ಹೇಳಿರುವಂತೆ 'ಮೂಕಂ ಕರೋತಿ ವಾಚಾಲಂ, ಪಂಗುಂ ಲಂಘಯತೇ ಗಿರಿಮ್.' ಆ ಶಕ್ತಿಯನ್ನು ದುರ್ಬಲ ಮಾನವನಿಗೆ ಕೊಡುವುದು ಮಾಧವನ ಪರಮಾನಂದ ಸ್ವರೂಪ· ಮಹಾನುಭಾವಿ ಉಮರ್ ಖಯ್ಯಾಂ ಇದೇ ನಿರ್ಧಾರಕ್ಕೆ ಬಂದಿದ್ದಾನೆ.

"ಪ್ರೇಮದಿಂದ ಸ್ಫೂರ್ತಿಗೊಂಡ ಬಂಡೆ ನರ್ತಿಸಬಲ್ಲುದು.
ಯಾವನೀ ಪ್ರೇಮವನ್ನು ಪಾಪವೆಂದು ಕರೆಯುವನೋ
ಅವನೇ ಪಾಪಿ.
ಪ್ರೇಮದಿಂದ ದೂರವಿರಬೇಕೆಂದು ಏಕೆ ಹೇಳುವೆ ?
ಮಾನವ ಜೀವ ಹದವಾಗುವುದು ಅತ್ಮನಿಂದ.''

''ರಾಜಾಧಿರಾಜರ ಕಿರೀಟಗಳಿಗಿಂತ ಒಂದು ಕಾಳು
ಪ್ರೇಮ ಮಿಗಿಲಾದುದು,
ಲೋಕದೆಲ್ಲಾ ನಗರಗಳಿಗಿಂತ ಬೆಲೆಯಾದುದು,
ಅನುಭಾವಿಯ ಹೃದಯದಿಂದೇಳುವ ನಿಟ್ಟುಸಿರು.
ಎಲ್ಲ ವೇಷಭೂಷಿತ ಅರ್ಚಕರ ಮಂತ್ರಗಳಿಗಿಂತ
ಮಿಗಿಲಾದುದು."

''ಕಾಲಚಕ್ರವಿಭ್ರಮಣಕ್ಕೆ ಸಿಕ್ಕಿದ ನಮ್ಮ ಅಹಂಕೃತ
ತಲೆಗಳನ್ನು ಪ್ರೇಮ ಬಾಗಿಸುತ್ತದೆ.
ಪ್ರೇಮವೆಮ್ಮ ಬಂಧನ ಕಳಚಿ, ಸರಪಣಿ ಸಡಲಿಸಿ,
ಸ್ವತಂತ್ರರನ್ನಾಗಿ ಮಾಡಿ, ಮೇಲಕ್ಕೆತ್ತುತ್ತದೆ.
ಮಾನವ ಪ್ರೇಮದ ಸವಿಯನ್ನು ಸೈತಾನ ಕಂಡಿದ್ದರೆ
ಮಾನವನಿಗೆ ಸಾವಿರಸಲ ಅವನು ಸಲಾಮು ಹೊಡೆಯುತ್ತಿದ್ದ."

"ಪ್ರೇಮದಿಂದ ನಿರ್ಗತಿಕ ಶುದ್ಧ ಮಾನಸಚಾರಿತ್ರನಾಗುತ್ತಾನೆ.
ಕುಟಿಲ ನರಿ ಸಿಂಹದಂತಾಗುತ್ತದೆ.
ಮುದಿತನ ತಾರುಣ್ಯವಾಗಿ ಮಾರ್ಪಟ್ಟು ನಲಿದು ನರ್ತಿಸುತ್ತದೆ.
ಋಷಿ, ಪ್ರೇಮಿಗಳಾದ ತರುಣರಿಗೆ ಕಟಾಕ್ಷ
ಪ್ರದಾನಮಾಡುತ್ತಾನೆ."

ಪ್ರೇಮಾನುಸಂಧಾನಕ್ಕೆ ದಿನವೇನು, ವಾರವೇನು? ಎಲ್ಲ ದಿನಗಳೂ ಅದಕ್ಕೆ ಸೂಕ್ತವೇ—

"ಇಂದು ಭಾನುವಾರ, ಸಬ್ಬತ್ ಎಂದು ಹೇಳುವರು,
ಆತ್ಮಾನಂದದಿಂದ ಹಿಗ್ಗು, ಮುಖೇಡಿಯಾಗಬೇಡ,
ಪ್ರತಿನಿತ್ಯ ಪ್ರೇಮದಿಂದ ಒಂದು ಒಳ್ಳೆಯ ಕೆಲಸ
ಮಾಡುತ್ತಿದ್ದರೆ,
ಇಂದು ಎರಡು ಒಳ್ಳೆಯ ಕೆಲಸಮಾಡು, ವಾರದ
ನಾಯಕನಲ್ಲನೇ ಭಾನು."

ಉಮರ್ ಪ್ರೇಮವನ್ನು ಇಂದ್ರಿಯಾತೀತವಾದ, ವಿಷಯರಹಿತವಾದ ಮಟ್ಟಕ್ಕೆ ಒಯ್ದು, ಪ್ರೇಯಮಾರ್ಗದಲ್ಲಿಯೇ ಶ್ರೇಯವನ್ನು ದೊರಕಿಸುವ ವಿಧಾನವನ್ನು ಸೂಚಿಸಿದ್ದಾನೆ. ಪ್ರಿಯ ಪ್ರೇಯಸೀ ಭಾವದಲ್ಲಿ ಈಶ್ವರೈಕ್ಯ ಪಡೆಯಲೆಳಸಿದ ಹಿರಿಯ ಅನುಭಾವಿಗಳ ಪಂಕ್ತಿಯಲ್ಲಿ ಅಮರವಾದ ಸ್ಥಾನವನ್ನು ಮಹಾನುಭಾವ ಉಮರ್ ಗಳಿಸಿಕೊಂಡಿದ್ದಾನೆ.

---

# ಅನುಬಂಧ

## ಅವಧೂತ

ಅವಧೂತ ಎಂದರೆ ಎಲ್ಲವನ್ನೂ ತೊಳೆದುಕೊಂಡವನು. ಏಕವು ಅನೇಕವಾಗುವಾಗ ಮೂಲದಲ್ಲಿ ಇಲ್ಲದ ಕೆಲವು ಗುಣಗಳು ಪ್ರಕಟವಾಗುವುವು. ಭೇದ ಎಂಬುದು ಅವುಗಳಲ್ಲಿ ಒಂದು. ಅಂತಹ ಭೇದಗಳು ಒಂದಲ್ಲ: ಎರಡಲ್ಲ: ನೂರಾರು. ಅವೆಲ್ಲವನ್ನೂ ಬಿಟ್ಟವನು ಅವಧೂತ.

ಸೃಷ್ಟಿಗೆ ಬಂದ ಒಂದೊಂದೂ ಪ್ರಕೃತಿಗೆ ವಶ. ಪ್ರಕೃತಿಯು ಪರಾ–ಅಪರಾ ಎಂದು ಎರಡು ವಿಧ. ಪರಾಪ್ರಕೃತಿಯೇ ಜೀವ: ಅದು ಸನಾತನವಾದುದು. ಅದು ವಿಕಾರಿಯಲ್ಲ: ಅದೇ ಎಲ್ಲವನ್ನೂ ಧರಿಸಿಕೊಂಡಿರುವುದು. ಅಪರಾಪ್ರಕೃತಿಯು ಒಡೆಯುವ ಸ್ವಭಾವವುಳ್ಳದು. ಒಂದೇ ರೂಪದಲ್ಲಿ ಇರುವುದೆನ್ನುವುದು ಇದಕ್ಕೆ ಇಲ್ಲವೇ ಇಲ್ಲ, ಇದೇ ಪಂಚಭೂತಗಳಾಗಿ, ಅವುಗಳ ವಿಕಾರವಾದ ಮನೋಬುದ್ಧಿ ಅಹಂಕಾರಗಳಾಗಿ ಸರ್ವತ್ರ ತಾನೇ ತಾನಾಗಿರುವುದು. ಜೀವನಿಗೆ ಗೂಡಾಗಿ ನಿಲ್ಲುವ ದೇಹವನ್ನು ಕಟ್ಟುವುದು ಇದು. ಆ ದೇಹ, ಆ ಕ್ಷೇತ್ರ, ಖನಿಜ, ಉದ್ಭಿಜ್ಜ, ಸ್ಥಾವರ, ಜಂಗಮಾತ್ಮಕವಾಗಿರಬಹುದು. ಇವು ನಾಲ್ಕರಲ್ಲೂ ತಿರ್ಯಕ್, ಮಾನವ, ದೇವ ಎಂಬ ಭೇದಗಳುಂಟು: ದೇವ, ಅಸುರಸಂಪದ್ಭೇದಗಳುಂಟು.

ಜೊತೆಗೆ ಪಂಚಭೂತಗಳು, ಮನೋ–ಬುದ್ಧಿ–ಅಹಂಕಾರ, ಇವೇ ಅಷ್ಟಮೂರ್ತಿಗಳು. ಇವುಗಳು ಕೂಡಿದಾಗ ವ್ಯಕ್ತಿತ್ವ. ಆ ವ್ಯಕ್ತಿ ಕೊಂಚ ಹೆಚ್ಚು ಕಡಿಮೆಯಾಗುವುದರಿಂದ ಅಲ್ಲಿ ಪ್ರತ್ಯೇಕತೆಯು ಕಾಣಿಸುವುದು. ಆಗ ಒಂದೊಂದು ವ್ಯಕ್ತಿಗೂ ಕಾಲದೇಶಗಳ ಪ್ರತ್ಯೇಕತೆಯೂ ಬೇಕಾಗುವುದು. ಇದರಿಂದ ಲೋಕಲೋಕಗಳು ಉಂಟಾಗುವುವು.

ಈಗ ಮೀನಿದೆ. ಅದೂ ಪ್ರಾಣಿಯೇ ಆದರೂ ಅದು ಬದುಕಲು ನೀರಿನ ಸಮುದ್ರ ಬೇಕು. ಭೂಮಿಯ ಪ್ರಾಣಿಗಳು ಬದುಕಲು ಗಾಳಿಯ

ಸಮುದ್ರ ಬೇಕು. ಇದರಂತೆಯೇ ಭೂಸಮುದ್ರದಲ್ಲಿ ಬದುಕುವ ಖನಿಜಗಳೂ ಉಂಟು. ಜಲ ವಾಯು ಸಮುದ್ರಗಳಲ್ಲಿ ಆಮೆ ಕಪ್ಪೆಗಳಂತೆ, ಭೂ ವಾಯುಗಳಲ್ಲಿ ಬದುಕುವ ಸ್ಥಾವರಗಳೂ ಉಂಟು.

ಇದರಂತೆಯೇ ಇತರ ಲೋಕಗಳು. ಈಗ ನಾವು ಪಾರ್ಥಿವಾಂಶ ಹೆಚ್ಚಾದವರು, ಅದರಿಂದ ಭೂಲೋಕದಲ್ಲಿ ಇದ್ದೇವೆ. ನಮ್ಮಂತೆ, ಜಲ, ಅಗ್ನಿ, ವಾಯು, ಆಕಾಶ, ಅಂಶಗಳು ಹೆಚ್ಚಾದವರೂ ಇದ್ದಾರೆ. ಅವರವರು ಆಯಾ ಲೋಕದಲ್ಲಿ, ಇದ್ದಾರೆ. ಇದೆಲ್ಲವೂ ಸೇರಿ ಒಂದು ಬ್ರಹ್ಮಾಂಡ. ಇಂತಹ ಬ್ರಹ್ಮಾಂಡಗಳು ಅಸಂಖ್ಯಾತವಾಗಿವೆ ಎಂದು ನಮ್ಮ ಶಾಸ್ತ್ರ.

ಇವೆಲ್ಲಕ್ಕೂ ಕಾರಣ ಮಾಯೆ. ಆಕೆಯು ಉನ್ಮೇಷ ನಿಮಿಷೋತ್ಪನ್ನ ವಿಪನ್ನ ಭುವನಾವಳೀ, ಕರಾಂಗುಲಿನಖೋತ್ಪನ್ನ ನಾರಾಯಣ ದಶಾಕೃತಿ. ಎಂದರೆ ಒಂದುಗಳಿಗೆಯೊಳಗಾಗಿ, ರೆಪ್ಪೆ ಹೊಯ್ದು ಮುಚ್ಚುವುದರೊಳಗಾಗಿ ಭುವನಾವಳಿಗಳನ್ನು ಸೃಜಿಸಿ, ಮುಗಿಸಬಲ್ಲವಳು: ಆಕೆಯ ಕೈಯುಗುರಿನಲ್ಲಿ ನಾರಾಯಣನ ದಶಾವತಾರಗಳು ನಡೆದುಹೋಗುವುವು.

---

೧) ಕಠೋಪನಿಷತ್ತಿನಲ್ಲಿ ಹೇಳಿರುವ ನಾಚಿಕೇತಾಗ್ನಿ ವಿದ್ಯೆಯನ್ನು ಬಲ್ಲವರು ಲೋಕಾಂತರಗಳಿಗೆ ಹೋಗಿ ಬರಬಲ್ಲರು.

೨) ಗೌತಮ ಧರ್ಮಸೂತ್ರ ೨-೨೯ ಪ್ರೇತ್ಯ. ಸ್ವಕರ್ಮ ಫಲಮನುಭೂಯ ತತಶ್ಶೇಷೇಣ ವಿಶಿಷ್ಟದೇಶ ಜಾತಿ ಕುಲ ರೂಪಾಯುಶ್ಶ್ರುತ ವೃತ್ತ ವಿತ್ತ ಸುಖ ಮೇಧಸೋ ಜನ್ಮ ಪ್ರತಿಪದ್ಯಂತೇ

೩) ಮೀಮಾಂಸಾದರ್ಪಣ: ಪುಟ ೬೦ ರಲ್ಲಿ ಶ್ರೀ ಕುಮಾರಿಲರ ತಂತ್ರವಾರ್ತಿಕವನ್ನು ಅನುಸರಿಸಿ ಹೀಗೆ ಬರೆದಿದೆ: ಕರ್ಮಶಕ್ತಿವಶದಿಂದ ದೇಹಭೇದಗಳು ಉಂಟಾಗುವುವು. ಜರಾಯುಜಾದಿ ಚತುರ್ವಿಧ ಭೇದಗಳು ಭೂಮಿಯಲ್ಲಿ ಇರುವುವು. ಇವುಗಳಲ್ಲಿ ಪಾರ್ಥಿವಾಂಶವು ಹೆಚ್ಚು. ಹಾಗೆಯೇ ತೋಯಾಂಶ ವಿನಿರ್ಮಿತಗಳಾಗಿ ಸ್ವಚ್ಛಾಂಗಲಕ್ಷಣವಾದ ದೇಹಗಳು ವರುಣಲೋಕದಲ್ಲಿ ಇರುವುವು. ವಾತಾಂಶ ಪ್ರಧಾನಗಳಾದ ಪ್ರಾಣಿಗಳು ತಮ್ಮ ಲಘುವೂ ಸೂಕ್ಷ್ಮವೂ ಆದ ದೇಹಗಳಿಂದ ಅಂತರಿಕ್ಷದಲ್ಲಿ ತಿರುಗುತ್ತಿರುವುವು. ಸ್ವರ್ಗಲೋಕದಲ್ಲಿ ತೇಜೋಮಯವೂ ಶುದ್ಧ ಪ್ರಭಾನ್ವಿತವೂ ಆದ ದೇಹಗಳಿಂದ ಮನೋಹರವಾದ ತೇಜಸ್ಸನ್ನು ಹರಡುತ್ತ ಇರುವ ಪ್ರಾಣಿಗಳು ಅಪ್ಯಾಯನಮಾಡುತ್ತಿರುವುವು.

೪) ಜೈನಶಾಸ್ತ್ರಗಳಲ್ಲಿ ಈ ವಿಷಯ ಇನ್ನೂ ವಿಶದವಾಗಿ ಹೇಳಲಾಗಿದೆಯಂತೆ.

ಇದಿಷ್ಟು ಭುವನಗಳೂ ಪಂಚೀಕೃತ ಪಂಚಭೂತಗಳಿಂದ ಆದವು. ಎಂದರೆ ಪಂಚಭೂತಗಳು ಒಡೆದು ಒಡೆದು ಒಂದರೊಡನೆ ಒಂದುಕೂಡಿ ಆದವು. ಈ ಭುವನಬ್ರಹ್ಮಾಂಡಗಳನ್ನೆಲ್ಲ ನಿರ್ಮಿಸಲು ಬೇಕಾದ ಭೂಭೂತ ಎಷ್ಟಿದೆಯೋ ಅದೆಲ್ಲ ಒಂದು ಎಂದರೆ, ಜಲಭೂತವು ಅದರ ಹತ್ತರಷ್ಟು. ಅಗ್ನಿಯು ಅದರ ಹತ್ತರಷ್ಟು. ವಾಯುವು ಅದರ ಹತ್ತರಷ್ಟು. ಆಕಾಶವು ಅದರ ಹತ್ತರಷ್ಟು. ಆತ್ಮನ ಹತ್ತನೆಯ ಒಂದು ಭಾಗ ಆಕಾಶ. ಈ ಆತ್ಮನು ಜೀವವಾಗಿ ಪಂಚಭೂತ ಮನೋ-ಬುದ್ಧಿ-ಅಹಂಕಾರಗಳಿಂದ ಆದ ದೇಹದಲ್ಲಿ ಇರುವನು ಎಂದು ತಿಳಿದು, "ಈ ಕ್ಷೇತ್ರವಾದ ದೇಹ, ಈ ಕ್ಷೇತ್ರದಲ್ಲಿರುವ ಕ್ಷೇತ್ರಜ್ಞನಾದ ಜೀವ, ಈ ಎರಡೂ ಆತ್ಮನ ಪ್ರಕೃತಿಗಳು, ಇವೆರಡಕ್ಕೂ ಆತ್ಮನು ದೊಡ್ಡವನು ಆ ಆತ್ಮನು ತಾನು: ಅದರಿಂದ ಈ ಎಲ್ಲವೂ ತಾನೇ!" ಎಂದು ತಿಳಿದವನು; ಆ ತಿಳಿವಳಿಕೆಯನ್ನು ಆಚರಣದಲ್ಲಿ ಇಟ್ಟುಕೊಂಡಿರುವವನು ಅವಧೂತ.

ಅವಧೂತನು ವರ್ಣಾಶ್ರಮಧರ್ಮಗಳಿಲ್ಲದವನು. ಎಂದರೆ ಅವನು ಧರ್ಮವನ್ನು ಆಚರಿಸಬೇಕೆಂಬ ನಿಯಮವಿಲ್ಲ: ಏಕೆಂದರೆ ಅವನಿರುವೆಡೆಯಲ್ಲಿ ಚತುಷ್ಪಾತ್ ಧರ್ಮವು ಸಾಕ್ಷಾತ್ತಾಗಿ ಇರುವುದು. ಗಿಡಗಳಿಗೆ ಬೆಳೆಯಲು ನೀರುಬೇಕು: ಹಾಗೆಂದು ಮಳೆಯಾದ ದಿವಸವೂ ಗಿಡಗಳಿಗೆ ನೀರೆರೆಯಬೇಕೆ? ಹಾಗೆ. ಅವಧೂತನಿರುವೆಡೆ ಧರ್ಮಮೇಘ ಎನ್ನುವ ಒಂದು ಜಾತಿಯ ಸಮಾಧಿ ಇದ್ದೇ ಇರುತ್ತದೆ. ಆ ಧರ್ಮ ಮೇಘವು ಅವಧೂತನಿಗೆ ಸಹಜ.

ಧರ್ಮಮೇಘವೆನ್ನುವುದು ಒಂದು ವಿಚಿತ್ರಾವಸ್ಥೆ. ಪಂಚಭೂತಗಳಲ್ಲಿ ಮನೋಬುದ್ಧಿ ಅಹಂಕಾರಗಳಲ್ಲಿ ಸತ್ತ್ವ ರಜಸ್ತಮೋಗುಣಗಳಿರುವುವು. ಅವುಗಳ ಹೆಚ್ಚುಕಡಿಮೆಯಿಂದ ಶ್ರದ್ಧೆಯು ಭಿನ್ನೈಸುವುದು. ಶ್ರದ್ಧೆಯಿಂದಲ್ಲೇ ಸರ್ವ ವ್ಯವಹಾರವೂ ನಡೆಯುವುದು. ಅಂತಹ ಶ್ರದ್ಧೆಯನ್ನು ಅದು ತಾಮಸವಾಗಿರಲಿ ರಾಜಸವಾಗಿರಲಿ, ಸಾತ್ವಿಕವನ್ನಾಗಿ ಮಾಡಬಲ್ಲ ಶಕ್ತಿ ಧರ್ಮಮೇಘಕ್ಕುಂಟು. ಸಾತ್ವಿಕ ಶ್ರದ್ಧೆಯಿಲ್ಲದವರಿಗೆ ಧರ್ಮದ ಸಾಕಲ್ಯ ಸ್ವರೂಪ ತಿಳಿಯದು. ಅದು ಇಲ್ಲದವರು ಆಚರಿಸುವುದು ಧರ್ಮ ವೈಕಲ್ಯ. ಹೀಗೆ ಸಾಕಲ್ಯಧರ್ಮಸ್ವರೂಪವನ್ನು ತೋರಿಸಬಲ್ಲ ಸಾತ್ವಿಕಶ್ರದ್ಧೆಯನ್ನು ಪ್ರಬೋಧ

ಗೊಳಿಸುವ ಧರ್ಮಮೇಘವೇ ಸಹಜಾವಸ್ಥೆಯಾಗುಳ್ಳವನು ಅವಧೂತ. ತುಂಬಿದ ಕೆರೆಯಿಂದ ಕೋಡಿಯಲ್ಲಿ ನೀರು ಹರಿಯುವಂತೆ, ಯಾವಾಗಲೂ ಧರ್ಮಮೇಘದಿಂದ ಈ ಚೋದನೆಯು ಹರಿಯುತ್ತಲೇ ಇರುವುದು. ಇದನ್ನೇ ಉಪದೇಶ ಸಾಹಸ್ರಿಯಲ್ಲಿ ಶಂಕರರು ದೃಢತಾ, ಸಂತಾನ ಎಂಬ ಎರಡು ಲಕ್ಷಣಗಳಿಂದ ನಿರ್ದೇಶಿಸಿರುವುದು. ಆದರಿಂದ ಅವಧೂತನು ಧರ್ಮವನ್ನು ಆಚರಿಸಬೇಕಾದ್ದಿಲ್ಲ. ಮುಟ್ಟಿದ್ದೆಲ್ಲ ಚಿನ್ನವನ್ನು ಮಾಡುವ ಸ್ಪರ್ಶಶಿಲೆಯು ಚಿನ್ನವನ್ನು ಕೂಡಿಟ್ಟುಕೊಳ್ಳಬೇಕೇನು? ಅವನನ್ನು ಕಂಡವರೆಲ್ಲರೂ ಧರ್ಮ ಪರಾಯಣರಾಗುವರೆಂದಮೇಲೆ ಅವನಿಗೆ ಧರ್ಮ ಅಧರ್ಮಗಳು ಎಲ್ಲಿಯವು?

ಎರಡನೆಯದು ಆತನು ಸರ್ವಸಂಗ ಪರಿತ್ಯಾಗಿಯು. ಆದರಿಂದಲೇ ಕಂಥಾ ಕೌಪೀನ ಕಮಂಡಲಗಳೂ ಇಲ್ಲದೆ ಇರುವುದು ಅವಧೂತ ಲಕ್ಷಣ.

ಅವಧೂತನು ತಾನೇ ಪಂಚಭೂತಸ್ವರೂಪನು. ಅದರಿಂದ ಪಂಚ ಭೂತಾತ್ಮಕವಾದ ಈ ಜಗತ್ತೆಲ್ಲವೂ ತಾನೇ ಆಗಿರುವುದರಿಂದ, ಅವನೇ ನನ್ನು ಧರಿಸಬೇಕು? ಅವನೇನನ್ನು ತಿನ್ನಬೇಕು? ಅವನೇನು ಕುಡಿಯಬೇಕು? ಅವನಿಗೆ ಆದಾನವಿಲ್ಲ: ವಿಸರ್ಗವಿಲ್ಲ. ಆವರೂ "ವಸಂತವಲ್ಲೋಕ ಹಿತಂ ಚರಂತಃ" ಆದ ಅವಧೂತರು ತಾವು ಅವಧೂತರಾದಾಗ ಇದ್ದ ದೇಹವನ್ನು ಅದು ತಾನಾಗಿ ಬೀಳುವವರೆಗೂ ಬೀಳಿಸುವುದಿಲ್ಲ.

ಈ ಅವಧೂತರ ಪೂರ್ವರೂಪವು ಅಜಗರವೃತ್ತಿ. ಅಜಗರವೃತ್ತಿ ಯೆಂದರೆ ಸಿಕ್ಕಿದರೆ ತಿಂದ. ಇಲ್ಲದಿದ್ದರೆ ಇಲ್ಲ. ಏನಾದರೆ ಅದು ಆಗಬಹುದು. ಇಂತಹ ಅಜಗರನೊಬ್ಬನನ್ನು ಪ್ರಹ್ಲಾದನು ಕಾವೇರೀತೀರದಲ್ಲಿ ನೋಡಿದ ನೆಂದು ಮಹಾಭಾರತದಲ್ಲಿಯೂ ಶ್ರೀಮದ್ಭಾಗವತದಲ್ಲಿಯೂ ಹೇಳಿದೆ.

ಅಜಗರನು ಪೂರ್ಣನಾದರೂ ಬಹಿಃ ಪ್ರಜ್ಞೆಯುಳ್ಳವನು. ಅಜಗರನು ಜ್ವಲನವೆಂಬ ಕರ್ಮವುಳ್ಳ ಜ್ಯೋತಿಯು. ಆದರದು ಆರ್ದ್ರಜ್ಯೋತಿ. ಇತರವನ್ನು ಸುಡದೆ ಬೆಳಗುವ ಜ್ಯೋತಿಯದು. ಅವಧೂತನು ಜ್ವಲನ-ಜ್ಯೋತಿ ಎಂಬ ಭೇದವಿಲ್ಲದ ಪ್ರಕಾಶಸ್ವರೂಪನು.

ಸನ್ಯಾಸವು ಅಜಗರನ ಪೂರ್ವರೂಪ. ಸಂನ್ಯಾಸವೆಂದರೆ ಕಾಮ್ಯಕರ್ಮ ನ್ಯಾಸವು. ಕರ್ಮತ್ಯಾಗವಲ್ಲ: ಕರ್ಮನ್ಯಾಸ ಸನ್ಯಾಸದ ಲಕ್ಷಣ. ಸನ್ಯಾಸಿಯು

ನಿರಗ್ನಿಯಾಗಬೇಕಾಗಿಲ್ಲ: ಅಕ್ರಿಯನೂ ಆಗಬೇಕಿಲ್ಲ. ಆದರೆ, ಕಾಮ್ಯ ಕರ್ಮನ್ಯಾಸ ಮಾಡಿರಬೇಕು. ಹಾಗೆಂದರೇನು ?

ಅಷ್ಟಮೂರ್ತಿಗಳಿಂದ ಆದುದು ದೇಹ. ಅದು ನಮ್ಮ ದೇಹದಂತೆ ಐದಾರು ಅಡಿ ಇರಬಹುದು: ಅಥವಾ ಈಶ್ವರನ ದೇಹದಂತೆ ಬ್ರಹ್ಮಾಂಡ ವ್ಯಾಪ್ತವಾಗಿರಬಹುದು. ಅಂತೂ ದೇಹವಿರುವವರೆಗೆ ಪ್ರಕೃತಿ ಸಂಗವುಂಟು. ಪ್ರಕೃತಿಯು ಗುಣಮಯಿಯು. ಪ್ರಕೃತಿಯು ದೇಹದೇಹಕ್ಕೂ ಒಂದೊಂದು ಸ್ವಭಾವವನ್ನು, ಇತಿಮಿತಿಯನ್ನು, ಕರ್ಮ, ಅಕರ್ಮ, ವಿಕರ್ಮಗಳನ್ನು ಸೃಷ್ಟಿಮಾಡಿರುವಳು. ಸ್ವಭಾವವೆಂದರೆ Nature, ಇತಿಮಿತಿಗಳೆಂದರೆ purpose & limitation, ಕರ್ಮ, ಅಕರ್ಮ, ವಿಕರ್ಮ ಎಂದರೆ duty, likes & dislikes, and natural functions. ಕರ್ಮವು ಶಾಸ್ತ್ರವಿಹಿತವಾದುದು. ಅಕರ್ಮವು ರಾಗದ್ವೇಷಗಳಿಂದ ಆದುದು: ವಿಕರ್ಮವು ಸಹಜ ವ್ಯಾಪಾರ. ಕರ್ಮ ವಿಕರ್ಮಗಳು ಬಂಧಕವಾಗುವುದಿಲ್ಲ: ಅಕರ್ಮದಲ್ಲಿಯೇ ಬಂಧನವಿರುವುದು. ಅದೇ ಕಾಮ್ಯಕರ್ಮ: ಅದನ್ನು ನ್ಯಾಸಮಾಡಿದವ ಸಂನ್ಯಾಸಿ. ನ್ಯಾಸವೆಂದರೆ ಅಕರ್ಮವೂ ಯಜ್ಞವಾಗಬೇಕು. ಯಜ್ಞವೆಂದರೆ ಹವಿರ್ದಾನ. ಭೋಗವೆಲ್ಲವೂ ಯೋಗವಾಗುವ ಮರ್ಮ ಅದು. ಅದನ್ನು ಮಾಡಬೇಕು. ಕಾಮ್ಯವಾಗಿ ಮಾಡುವ ಕರ್ಮವನ್ನೂ ಯಜ್ಞವನ್ನು ಮಾಡುವುದು ಹೇಗೆ ಎಂದರೆ, ಏಕದಲ್ಲಿ ಅನೇಕವನ್ನೂ ಅನೇಕದಲ್ಲಿ ಏಕವನ್ನೂ ಕಂಡು ವಿಶ್ವರೂಪವನ್ನೂ ವಿಭೂತಿಯನ್ನೂ ಕಂಡು ನಡೆಯುವುದು. ಸಮದರ್ಶಿಯಾಗಿ, ವಾಸುದೇವನನ್ನು ಬಲ್ಲ ಪಂಡಿತನಾದವನು ಸಂನ್ಯಾಸಿ. ಅವನಿಗೆ ಅನ್ನ–ಅನ್ನಾದ ಭೇದವಿಲ್ಲ. ಎರಡೂ ಬ್ರಹ್ಮವೇ! ಅಂಥವನನ್ನು ಕುರಿತೇ ಶ್ರೀಕೃಷ್ಣ ಹೇಳಿದುದು: "ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಂ ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ" ಎಂದು. ಗಾಯತ್ರಿಯ ಉಪದೇಶಕಾಲದಲ್ಲಿ ಕಲಿಸುವ ಪ್ರಾಜಾಪತ್ಯವ್ರತವಿದು. ಏಕಮನೇಕಸ್ಮಿನ್ – ಅನೇಕಮೇಕಸ್ಮಿನ್ ಕಾಣುವುದೇ, ಯಾವಾಗಲೂ ಕಾಣುತ್ತಿರುವುದೇ, ಪ್ರಾಜಾಪತ್ಯವ್ರತ.

ಈ ವ್ರತಸಿದ್ಧಿಗೆ ಅಷ್ಟಮೂರ್ತಿಗಳೂ ಪ್ರಸನ್ನರಾಗಬೇಕು. ಅದನ್ನೇ ಕಾಲಿದಾಸನು ಶಾಕುಂತಲದ ನಾಂದೀ ಶ್ಲೋಕದಲ್ಲಿ ಅವತು ತಾಭಿರಷ್ಟಾಭಿರೀಶಃ

ಎಂದು ಹೇಳಿದುದು. ಮಾಲವಿಕಾಗ್ನಿ ಮಿತ್ರದಲ್ಲಿ ವ್ಯಪಸಯತು ವಸ್ತ್ರಾಮಸೀಂ ವೃತ್ತಿಮೀಶಃ ಎಂದವನು ಶಾಕುಂತಲದಲ್ಲಿ ಈ ಮಾತು ಆಡಿದ. ಮುಂದೆ ವಿಕ್ರಮೋರ್ವಶೀಯದಲ್ಲಿ ಸ್ಥಿರ ಭಕ್ತಿ ಯೋಗಸುಲಭಸ್ಸ ಸ್ಥಾಣುಃ ನಿಶ್ಶ್ರೇಯಸಾಸ್ತು ವಃ ಎಂದು ನುಡಿದ. ಆ ಸ್ಥಾಣುವನ್ನು ಒಲಿಸಿಕೊಂಡವನು ಸಂನ್ಯಾಸಿ.

ಈ ಅಷ್ಟಮೂರ್ತಿಗಳಿಗೂ ಪ್ರತ್ಯೇಕ ಪ್ರತ್ಯೇಕವಾದ ಗತಿಗಳಿವೆ. ಈ ಅಷ್ಟಮೂರ್ತಿಗಳ ಪ್ರಸಾದವಾಗುವುದು ಎಂದರೆ, ಈ ಅಷ್ಟಮೂರ್ತಿಗಳ ಅಭಿಮಾನದೇವತೆಗಳ ಪ್ರಸಾದವಾಗಿ ಚಿಕ್ಕದು ದೊಡ್ಡದರಲ್ಲಿ ಹುತವಾಗುವುದು. ಹಾಗೆ ಹುತವಾದರೆ ಅದು ಲಯವಾಗುವುದು. ಈ ಕ್ರಿಯೆಯನ್ನು ಸಾಂಗವಾಗಿ ಆಯುರ್ವೇದದಲ್ಲಿ ಜಾರಣ ಮಾರಣ ಸ್ತಂಭನಾದಿ ಕ್ರಿಯೆಗಳಾಗಿ ವರ್ಣಿಸಿದೆ. ಹಾಗೆ ಗತಿ ಸ್ತಂಭನಮಾಡಿದವರು ಆಯಾಭೂತಗಳಿಂದ ಆಗುವ ಹಾನಿಯನ್ನು ತಡೆಯಬಲ್ಲರು. ಜಲಸ್ತಂಭ ಮಾಡಿದ ದುರ್ಯೋಧನನು ನೀರಿನಲ್ಲಿ ಮುಳುಗಿಕೊಂಡಿದ್ದ. ಆದರೆ ಅದು ಜಲಜಯವಲ್ಲ. ಜಲಭೂತದ ಗತಿಯನ್ನು ಅಗ್ನಿಭೂತದಲ್ಲಿ ಹೋಮಮಾಡಬೇಕು. ಆಗ ಅದನ್ನು ಗೆದ್ದಂತಾಯಿತು. ಹಾಗೆ ಆಗಲು ಜಲದ ಅಭಿಮಾನೀ ದೇವತೆಯ ಅಪ್ಪಣೆಯಾಗಬೇಕು.

ಉಪನಿಷತ್ತಿನಲ್ಲಿ "ಪಂಚಾತ್ಮ ಸಂಕ್ರಮಣ"ವೆಂದು ಹೇಳಿರುವುದೇ ಇದನ್ನು. ಹೀಗೆ ಪಂಚಭೂತವಿಕಾರಗಳಿಂದ ಬಿಡಿಸಿಕೊಂಡು ಪಂಚಭೂತಗಳನ್ನು ಗೆದ್ದು ವ್ಯೋಮಾತೀತನಾದರೆ ಅವನು ನಿರಂಜನ. ಅವನು ಅವಧೂತ. ವ್ಯೋಮದಲ್ಲಿ ಶೂನ್ಯಗತಿ. ಅದನ್ನು ಗೆಲ್ಲದೆ ಅದಕ್ಕೆ ವಶನಾದರೆ ಅವನು ಶೂನ್ಯದಲ್ಲಿ ಲಯವಾಗುವನು. ಆಗ ಅವನು ತಾನೂ ಲಯವಾಗಿ, ಶೂನ್ಯವಾದಿಯಾಗುವನು. ಹಾಗಾಗ ಬಾರದು ಎಂದು ಉಪನಿಷತ್ತು ಮೊದಲೇ ಅಸ್ತಿತ್ಯೇವ ಉಪಲಬ್ಧವ್ಯಃ, ಸತ್ಯಂ ಜ್ಞಾನಂ ಅನಂತಂ ಬ್ರಹ್ಮ – ಎಂದು ಹೇಳಿತು. ಹಾಗೆ ವಿಧಿಮುಖವಾಗಿ, ಅಸ್ತಿ ಆಗಿರುವ ಬ್ರಹ್ಮದಲ್ಲಿ ಶ್ರದ್ಧೆಯಿಟ್ಟು, ಆಕಾಶದ ಶೂನ್ಯಗತಿಯನ್ನೂ ಲಯಮಾಡಿ ತಾನು ಅಶೂನ್ಯನೆಂದು ತಿಳಿದವನು ನಿರಂಜನನು.

ಅಂತಹ ನಿರಂಜನನು ಯಾವ ಗತಿಗೂ ಸಿಕ್ಕದವನು. ವ್ಯೋಮದ ಗುಣ ಶಬ್ದ. ಆ ಶಬ್ದವು ಅಗ್ನಿಗೆ ಸಿಕ್ಕಿ ಎಂದರೆ ವಾಯುವಿನಲ್ಲಿ ಇಳಿದು

ಅಗ್ನಿಭೂತದ ಸಂಪರ್ಕವನ್ನು ಹೊಂದಬೇಕು. ಅದೂ ಸಾಲದು. ಮತ್ತೆ ಪಂಚೀಕರಣವಾದ ಅಗ್ನಿಯಾದರೆ ಆಗ ವಾಕ್ಕು ಆಗುವುದು. ಈ ವಾಕ್ಕು ಆ ನಿರಂಜನತ್ವವನ್ನು ಹೇಗೆ ವರ್ಣಿಸೀತು? ಆದರಿಂದ ಶ್ರುತಿ ಭಗವತಿಯು ತಾನೇ ಕೃಪೆಮಾಡಿ ಆ ನಿರಂಜನನಾದಾಗ ಲಭಿಸುವ ಬ್ರಹ್ಮದ ಲಕ್ಷಣವನ್ನು ಸತ್ಯಂ ಜ್ಞಾನಂ ಅನಂತಂ ಬ್ರಹ್ಮ ಎಂದು ಹೇಳಿ ಅದನ್ನು ಪಡೆದವನು ಸರ್ವ ಕಾಮಾನ್ ಹ ಅಶ್ನುತೇ ಎಂದು ಅದಾದವನ ಲಕ್ಷಣವನ್ನೂ ಹೇಳಿತು. ಅದನ್ನು ಪಡೆದವನು ಆಪ್ತಕಾಮನು, ಕಾಮವು ತೃಪ್ತವಾಗುವುದು ಆಗ–ಅದುವರೆಗೆ ಕಾಮನ ಕೋಟಲೆ ತಪ್ಪಿಲ್ಲ. ಹಾಗೆ ಕಾಮದ ಕೋಟಲೆ ತಪ್ಪಿದವನು ಅವಧೂತ. ಕಾಮವು ಅಪೂರ್ಣದ ಲಕ್ಷಣ. ಅದಿಲ್ಲದಿರುವುದು ಪೂರ್ಣದ ಲಕ್ಷಣ. ಎಲ್ಲವೂ ತಾನೇ ಆಗಿರಲು, ತಾನಲ್ಲದ ಇನ್ನೇನೂ ಇಲ್ಲವೇ ಇಲ್ಲವಾಗಿರಲು, ಏನನ್ನು ಬಯಸಬೇಕು? ಹೇಗೆ ಬಯಸಬೇಕು?

ಎಲ್ಲೆಲ್ಲೂ ವ್ಯವಹಾರವು ನಡೆಯುವುದೆಲ್ಲಾ ಈ ಕಾಮದಿಂದಲೇ! ಸರ್ವಂ ಕಾಮಸ್ಯ ಚೇಷ್ಟಿತಂ. ಈ ಕಾಮವು ಇಂದ್ರಿಯ, ಮನೋ ಬುದ್ಧಿಗಳೆಂಬ ದುರ್ಗವನ್ನು ಆಶ್ರಯಿಸಿರುವುದು. ಪೂರ್ಣವನ್ನು ಮರೆಸಿ ಅಪೂರ್ಣವೆಂಬ ಭ್ರಾಂತಿ ಹಿಡಿಸಿ, ಮೋಹದಲ್ಲಿ ಮುಳುಗುವಂತೆ ಮಾಡುವುದು ಈ ಕಾಮವು. ಅದರಿಂದ ಇದೇ ಅಜ್ಞಾನವು. ಅಜ್ಞಾನವು ಸರ್ವವ್ಯಾಪಿಯು. ಇದರ ಅತ್ತಕಡೆಯೇ ಯೋಗಮಾಯೆಯು. ಅವತಾರಮಾಡಿ ಬಂದವನನ್ನೂ ಇದು ಬಿಡುವುದಿಲ್ಲ. ಅವನೂ ಯೋಗಮಾಯೆಯನ್ನು ಆಶ್ರಯಿಸಿಯೇ ಹುಟ್ಟುವನು: ವ್ಯವಹಾರ ಮಾಡುವನು.

ಈ ಕಾಮವು ತಮಸ್ಸು ತುಂಬಿದಾಗ ಕೊಲ್ಲುವುದು: ರಜಃಪೂರ್ಣ ಮಾದಾಗ ವಿಕಾರಮಾಡಿ ತೋರಿಸುವುದು: ಸತ್ವಮಯವಾದಾಗ ಗರ್ಭವನ್ನು ಬೆಳೆಸುವ ಚೀಲದಂತೆ ಬೆಳೆಸುವುದು. ಕಾಮವು ಸತ್ವಮಯವಾಗಬೇಕಾದರೆ ಅದು ಧರ್ಮಾವಿರುದ್ಧವಾಗಬೇಕು. ಆಗ ಅದು ಮಾಡಿಸಿದ ಕರ್ಮಗಳೂ ಯಜ್ಞಗಳೇ ಆಗುವುವು.

ಕಾಮವು ಧರ್ಮಾವಿರುದ್ಧವಾಗಬೇಕಾದರೆ ಕರ್ತೃಸ್ವರೂಪವು ತಿಳಿಯಬೇಕು. ಈಗ ನಾವು ಕರ್ತೃ ಎನ್ನುವುದು, ಎಂದುಕೊಂಡಿರುವುದು, 'ಅಹಂಕಾರ.' ಇದನ್ನೇ ಗೀತೆಯಲ್ಲಿ ತಾಮಸ ರಾಜಸ ಸಾತ್ವಿಕ ಭೇದದಿಂದ

ತೋರಿಸಿರುವುದು. ಇದೂ ಪ್ರಕೃತಿಯೇ! ಅದರ ಅಷ್ಟಮೂರ್ತಿಗಳಲ್ಲಿ ಒಂದು ಎಂಬುದನ್ನು ಗಮನಿಸಿದರೆ, ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ. ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇರ್ಜ್ಞಾನವಾನಪಿ ಎಂಬುದು ತಿಳಿಯುವುದು. ಸನ್ಯಾಸಿಯು ಈ ಅಹಂಕಾರವನ್ನು ದಾಟಿದವನು. ಸನ್ಯಾಸಿಯು ಪೂರ್ಣನಾದರೆ, ಆಗ ಅಜಗರ. ಅಜಗರನಿಗೆ ಬಾಹ್ಯವೃತ್ತಿಗಳೂ ಉಂಟು. ಅಲ್ಲಿಂದಾಚೆಗೆ ಪ್ರಕೃತಿಯು ತನ್ನ ಸರ್ವಸ್ವವನ್ನೂ ಒಪ್ಪಿಸಿ ಕೈಮುಗಿಯುವಳು. ಆಗ ಅವಧೂತ. ಉಪನಿಷತ್ತಿನಲ್ಲಿ ಒಂದೆಡೆ 'ತಸ್ಮೈ ಸರ್ವೇ ದೇವಾಃ ಬಲಿಮಾವಹಂತಿ.' ಎಂದು ಹೇಳಿದೆ. ಅಂಥವನು ಅವಧೂತ!

ಪುಣ್ಯದಿಂದ ಪಂಚಭೂತಗಳು ನಿರ್ಮಲವಾಗುವುವು: ಪಾಪದಿಂದ ಪಂಚಭೂತಗಳು ಮಲಿನವಾಗುವುವು. ಭೂತಗಳ ಮಾಲಿನ್ಯ ಹೆಚ್ಚಿದ ಹಾಗೆಲ್ಲಾ ಹೀನ ಜನ್ಮ: ಭೂತಗಳ ಪಾರಿಶುದ್ಧ್ಯತೆ ಹೆಚ್ಚಿದಂತೆಲ್ಲ ಉತ್ತಮ ಜನ್ಮ. ಈ ಜನ್ಮಗಳು ಇರುವುದಕ್ಕೆ ಬೇರೆ ಬೇರೆ ಲೋಕಗಳು. ಆ ಲೋಕಗಳಲ್ಲೆಲ್ಲಾ ಉತ್ತಮೋತ್ತಮವಾದುದು ಬ್ರಹ್ಮಲೋಕ. ಅಲ್ಲಿರುವ ಸೌಖ್ಯ ಇನ್ನೆಲ್ಲಿಯೂ ಇಲ್ಲ.

ಹೀಗೆ ಸೌಖ್ಯವು ಹೆಚ್ಚು ಕಡಿಮೆಯಾಗಲು ಕಾರಣ ಸತ್ಯದರ್ಶನ. ಉಪನಿಷತ್ತಿನ ಪ್ರಕಾರ ಸತ್ಯದ ಪೂರ್ಣದರ್ಶನವಾಗುವುದು ಸತ್ಯಲೋಕದಲ್ಲಿ. ಅದೇ ಬ್ರಹ್ಮಲೋಕ. ಆ ಸತ್ಯವು ಪಿತೃಲೋಕದಲ್ಲಿ ಸ್ವಪ್ನದಲ್ಲಿ ಕಂಡಂತೆ ಕಾಣುವುದು. ನೀರಿನಲ್ಲಿ ಕಾಣುವಂತೆ ಗಂಧರ್ವಲೋಕದಲ್ಲಿ: ಬ್ರಹ್ಮಲೋಕದಲ್ಲಿ ಬೆಳಕು ನೆರಳುಗಳಂತೆ ಕಂಡರೆ, ಇಲ್ಲಿ, ಈ ಭೂಲೋಕದಲ್ಲಿ, ನಿರ್ಮಲವಾದ ಬುದ್ಧಿಯಲ್ಲಿ ಕನ್ನಡಿಯಲ್ಲಿ ಕಾಣುವಷ್ಟು ಸ್ಪಷ್ಟವಾಗಿ ಕಾಣುವುದು. ಹಾಗಾಗಿ ಸತ್ಯದರ್ಶನಮಾಡಿದವನು ಪುಣ್ಯವಂತ.

ಪುಣ್ಯವಂತನು ಇತರರಿಗಿಂತ ಹೆಚ್ಚು. ಏಕೆ ಎಂದರೆ ಅವನಿಗೆ ಆನಂದಾನುಭವಶಕ್ತಿಯು ಹೆಚ್ಚು. ಅದರಿಂದ ಅವನಿಗೆ ಆನಂದವು ಹೆಚ್ಚು. ಆನಂದವೆಂದರೆ ಈಗ ನಾವು ಸಾಧನಗಳಿಂದ ಲಭಿಸುವ ಸಿದ್ಧಿಯಾದ ಸುಖವೇ ಎಂದುಕೊಂಡಿದ್ದೇವೆ. ಇಂದ್ರಿಯ ಮನೋಬುದ್ಧಿಗಳ ಉಚ್ಛೋಷಣವು ದುಃಖ: ವಿಜೃಂಭಣವು ಸುಖ. ಆದರೆ, ಈ ಸುಖವು ಇಂದ್ರಿಯ ಮನೋಬುದ್ಧಿಗಳ ತೇಜಸ್ಸನ್ನು ಬಲಿಗೊಟ್ಟು ಪಡೆದ ಸಿದ್ಧಿ. ಹೀಗೆ ಇಂದ್ರಿಯ

ಮನೋಬುದ್ಧಿಗಳ ತೇಜಸ್ಸನ್ನು ಬಲಿಗೊಡದೆ ಪಡೆದದ್ದು ಆನಂದ. ಅದ ರಿಂದಲೇ, ಆನಂದವು ಆತ್ಮರತಿ.

ಯಸ್ತ್ವಾತ್ಮರತಿರೇವಸ್ಯಾತ್ ಆತ್ಮತೃಪ್ತಶ್ಚ ಮಾನವಃ ।
ಆತ್ಮನ್ಯೇವಚ ಸಂತುಷ್ಟಃ ತಸ್ಯ ಕಾರ್ಯಂ ನ ವಿದ್ಯತೇ ॥

ಕರ್ಮ, ಕರಣ, ಅಧಿಷ್ಠಾನ, ಕರ್ತಾ, ನಾಲ್ಕೂ ಏಕರೂಪವಾದರೆ ಆಗ ಈ ಆನಂದ. ಆತ್ಮನನ್ನು ಕುರಿತು, ಆತ್ಮನಿಂದ, ಆತ್ಮನಲ್ಲಿ, ಆತ್ಮನೇ ಮಾಡುವ ಕರ್ಮ ಆತ್ಮರತಿ. ಅದು ಸಹಜಾನಂದ. ಆದು ಮಿಕ್ಕ ಆನಂದ ಗಳಿಗೆಲ್ಲ ಹೆಚ್ಚು. ಇದನ್ನು ಕುರಿತು ತೈತ್ತರೀಯದಲ್ಲಿ ಬ್ರಹ್ಮಾನಂದವಲ್ಲಿಯಲ್ಲಿ ಹೇಳಿದೆ. ಆದರೆ ಅಂತಹ ಆನಂದವನ್ನು ಪಡೆಯುವವನು ಶ್ರೋತ್ರಿಯನೂ ಅಕಾಮಹತನೂ ಆಗಿರಬೇಕು. ಇಲ್ಲದಿದ್ದರೆ ಆ ಆನಂದವು ದೊರೆಯುವುದಿಲ್ಲ.

ಅವಧೂತನು ವಿರಜಾ ವಿಪಾಪ್ಮಾ. ಆದುದರಿಂದ ಅವನು ಸಂಶುದ್ಧನು. ಅವನು ಸುಷುಪ್ತಿಯನ್ನೂ ದಾಟಿದವನು. ಅವನಿರುವುದು ಸುಷುಪ್ತಿಯಲ್ಲಿ ಎಂದು ನಮಗೆತೋರುವುದು. ಹೀಗೆ ತೋರುವುದಕ್ಕೆ ಕಾರಣ ನಾವು ಜಾಗ್ರತ್ತು ಸಹಜಾವಸ್ಥೆಯೆಂದುಕೊಂಡಿರುವುದು. ಆದರೆ, ಜಾಗ್ರತ್ತಲ್ಲ ಸಹಜಾವಸ್ಥೆ. ಸಹಜಾವಸ್ಥೆ ಸುಷುಪ್ತಿ. ಸುಷುಪ್ತಿಯಿಂದ ಹುಟ್ಟಿಬಂದವು ಈ ಸ್ವಪ್ನ ಜಾಗ್ರತ್ತು ಗಳು. ನಾವು ತಲೆಕೆಳಗಾಗಿ ನಿಂತು ಆಕಾಶದ ಮೇಲೆ ನಿಂತಿದೇವೆ ಎಂಬಂತೆ ಮಾಡುತ್ತಿದ್ದೇವೆ. ಶಂಕರರು ಸುಷುಪ್ತಾಖ್ಯಂ ತಮೋಜ್ಞಾನಂ ಬೀಜಂ ಸ್ವಪ್ನಪ್ರಬೋಧಯೋಃ ಎಂದಿರುವುದನ್ನು ಗಮನಿಸಿ. ಸುಷುಪ್ತಿಯು ತಮಸ್ಸು. ಆದರೆ ಅದನ್ನು ಭೇದಿಸಿ, ಅಲ್ಲಿಂದಾಚೆಗೆ ಇರುವ 'ಆದಿತ್ಯವರ್ಣಂ ಪುರುಷಂ ಮಹಾಂತಂ ತಮಸಸ್ತು ಪಾರೇ' ನೋಡಬಲ್ಲೆವೇನು? ಅದು ತುರೀಯ. ಅಲ್ಲಿ ಇನ್ನೂ ಭೇದವಿದೆ. ಅಲ್ಲಿ ದೃಶ್ಯ ವಿಲೀನವಾಗಿದೆ. ಆದರೂ ಪುರುಷ ಏವೇದಂ ಸರ್ವಂ ಆಗಿಲ್ಲ. ಹಾಗೆ ಆದವನು ಅವಧೂತ!

ತುರೀಯದಲ್ಲಿ Reality beyond relativity ಕಾಣುವುದು. ಅದೇ ಆದವನು ಅವಧೂತ!

ಹಾಗೆ, ತಾನೂ ತನ್ನ ಕಣ್ಣೂ ತನ್ನ ಕಣ್ಣಿಗೆ ಬಿದ್ದುದೂ ಸರ್ವವೂ ಸಮಸ್ತವೂ ಪುರುಷನೇ ಆದವನು ಅವಧೂತ!

ಅಂಥ ಸಿದ್ಧಿಯನ್ನೇ ವಿವೇಕಚೂಡಾಮಣಿಯಲ್ಲಿ 'ಸಕಲ ನಿಗಮ ಚೂಡಾಸು ಅಂತ ಸಿದ್ಧಾಂತರೂಪಂ ಪರಂ ಇದಮತಿಗುಹ್ಯಂ' ಎಂದು ಹೇಳಿರುವುದು. ಇಂತಹ ಸಿದ್ಧನನ್ನು ಕುರಿತು ಆಚಾರ್ಯರು ಇನ್ನೂ ಕೆಲವು ಶ್ಲೋಕಗಳನ್ನೂ ಹೇಳಿದರು :—

ದಿಗಂಬರೋ ವಾಪಿ ಚ ಸಾಂಬರೋ ವಾ
ತ್ವಗಂಬರೋ ವಾಪಿ ಚಿದಂಬರಸ್ಥಃ
ಉನ್ಮತ್ತವದ್ವಾಪಿ ಚ ಬಾಲವದ್ವಾ
ಪಿಶಾಚವದ್ವಾಪಿ ಚರತ್ಯವನ್ಯಾಂ ॥ ೫೪೦ ॥

ಚಿದಂಬರನಾದ ಆ ಅವಧೂತನು ಕೆಲವುವೇಳೆ ದಿಗಂಬರನಾಗಿ, ಇನ್ನೂ ಕೆಲವುವೇಳೆ ಸಾಂಬರನಾಗಿ, ಮತ್ತೆ ಕೆಲವುವೇಳೆ ಅಜಿನಾಂಬರನಾಗಿ, ಉನ್ಮತ್ತನಹಾಗೋ ಬಾಲನಹಾಗೋ ಪಿಶಾಚದಹಾಗೋ ಭೂಮಿಯಲ್ಲಿ ಚರಿಸುತ್ತಿರುವನು.

ಕಾಮಾನ್ನಿಷ್ಕಾಮರೂಪೀ ಸಂಶ್ಚರತ್ಯೇಕಚರೋ ಮುನಿಃ
ಸ್ವಾತ್ಮನ್ಯೇವ ಸದಾ ತುಷ್ಟಃ ಸ್ವಯಂ ಸರ್ವಾತ್ಮನಾ ಸ್ಥಿತಃ

ಮುನಿಯಾದವನು (ತನ್ನ ಒಳಗಿರುವ ಆಹತಶಬ್ದವನ್ನು ಅನಾಹತದಲ್ಲಿ ಹೋಮಮಾಡಿ ಮೌನವನ್ನು ಸಾಧಿಸಿದವನು ಮುನಿ. ಯೋಗವಾಸಿಷ್ಠದ ಮಹಾಮೌನೋಪಾಖ್ಯಾನವನ್ನು ನೋಡಿ.) ನಿಷ್ಕಾಮವೇ ಮೂರ್ತಿಯಾದಂತಿದ್ದು ಕಾಮಗಳನ್ನು ಅನುಭವಿಸಿದರೂ ಏಕೈಕನಾಗಿರುವನು. ಅವನಿಗೆ ತುಷ್ಟಿಯು ತನ್ನಿಂದಲೇ ಹೊರತು ಇತರರಿಂದಲ್ಲ: ಎಲ್ಲವೂ ತಾನೇ ಆಗಿರಲು ಅವನಿಗೆ ತುಷ್ಟಿಯು ಇನ್ನೆಲ್ಲಿಂದ ಬಂದೀತು ?

ಕ್ವಚಿನ್ಮೂಢಃ ವಿದ್ವಾನ್ ಕ್ವಚಿದಪಿ ಮಹಾರಾಜ ವಿಭವಃ
ಕ್ವಚಿದ್ಭ್ರಾಂತಃ ಸೌಮ್ಯಃ ಕ್ವಚಿದಜಗರಾಚಾರಕಲಿತಃ
ಕ್ವಚಿತ್ಪಾತ್ರೀಭೂತಃ ಕ್ವಚಿದವಮತಃ ಕ್ವಾಪ್ಯವಿದಿತಃ
ಚರತ್ಯೇವಂ ಪ್ರಾಜ್ಞಃ ಸತತಪರಮಾನಂದಸುಖಿತಃ ॥

ಪ್ರಾಜ್ಞನಾದ ಆ ಮಹಾನುಭಾವನು ಯಾವಾಗಲೂ ಪರಮವಾದ ಬ್ರಹ್ಮಾನಂದದಲ್ಲಿ ಸುಖಪಟ್ಟವನು. ಆದ್ದರಿಂದ ಕೆಲವು ಕಡೆ ಮೂಢನಂತೆ, ಇನ್ನು ಕೆಲವೆಡೆ ವಿದ್ವಾಂಸನಂತೆ, ಇನ್ನೂ ಕೆಲವೆಡೆ ಮಹಾರಾಜನಂತೆ ವಿಭವ ಸಂಭನ್ನನಾಗಿ, ಮತ್ತೊಂದೆಡೆ ಭ್ರಾಂತನಾಗಿಯೋ ಸೌಮ್ಯನಾಗಿಯೋ, ಮಗದೊಂದೆಡೆ ಅಜಗರದ ಆಚಾರಗಳನ್ನು ಆಚರಿಸುವನಾಗಿ, ಇನ್ನೊಂದೆಡೆ ಯೋಗ್ಯನಾಗಿ, ಇನ್ನೊಂದೆಡೆ ಅಯೋಗ್ಯನಾಗಿ, ಇನ್ನೊಂದೆಡೆ ಯಾರಿಗೂ ಗೋಚರನಾಗದೆ ಚರಿಸುವನು.

ಹೀಗೆ, ಅಹಂಕಾರವನ್ನು ದಾಟಿ, ಸುಷುಪ್ತಿಯನ್ನು ಭೇದಿಸಿ, ಆನಂದ ಸ್ವರೂಪನಾಗಿರುವವನು ಅವಧೂತ. ಅವಧೂತನೆಂದರೆ ಉಪನಿಷತ್ತಿನಲ್ಲಿ ಹೇಳುವ 'ಮೇಧಯಾ ಪಿಹಿತಃ ಬ್ರಹ್ಮಣಃ ಕೋಶಃ.'

ಕಪಿಲ, ದತ್ತಾತ್ರೇಯಾದಿಗಳನ್ನು ಅವಧೂತರು ಎನ್ನುವುದು ಸಂಪ್ರದಾಯದ ಮಾತು. ಈ ಮತವು ಕೃತತ್ರೇತಾಯುಗಗಳಲ್ಲಿ ಬಹುವಾಗಿದ್ದು ದ್ವಾಪರದಲ್ಲಿ ಕ್ಷೀಣಿಸಿತು. ಆದರೂ ಈಗಲೂ ಅಲ್ಲಲ್ಲಿ ವಿಜನಸ್ಥಳಗಳಲ್ಲಿ ಒಬ್ಬೊಬ್ಬರು ಇದ್ದಾರೆ. ಈಗ ಶೃಂಗೇರಿಯ ಶ್ರೀ ಶ್ರೀಗಳು ಈ ಅವಸ್ಥೆಯಲ್ಲಿದ್ದಾರೆ. ದತ್ತಾತ್ರೇಯರು ಈಗಲೂ ಅನೇಕರಿಗೆ ದರ್ಶನಾದಿಗಳನ್ನು ಕೊಟ್ಟು ಉದ್ಧಾರಮಾಡಿರುವ ಪ್ರಸಂಗಗಳು ನೂರಾರು ಉಂಟು.

ಇಂತಹ ಮಹನೀಯರು ಆಕಾಶಕೋಶಗಳ ಹಾಗೆ ಇದ್ದು ಬೇಕಾದಾಗ ದೇಹವನ್ನು ಪಡೆದು ಲೋಕೋಪಕಾರಗಳನ್ನೂ ಮಾಡುವರು ಎಂದು ಬ್ರಹ್ಮ ಸೂತ್ರದಲ್ಲಿ ಹೇಳಿದೆ.

* * * *

ಎಲ್ಲವನ್ನೂ ಕಾಲದೇಶಗಳ ಚೌಕಟ್ಟಿನಲ್ಲಿಟ್ಟು ನೋಡುವುದು, ಮಾತೆತ್ತಿದರೆ 'ಹಿಸ್ಟಾರಿಕಲಿ' ಎನ್ನುವುದು ಈಗಿನವರ ಲಕ್ಷಣ.

ಈ ಆಧುನಿಕರ ಮತದಂತೆ, "ಆರ್ಯರು ಎಂದರೆ ವೇದಮತವನ್ನು ಆಚರಿಸುತ್ತಿದ್ದವರು. ಅವರಲ್ಲಿ ಸನ್ಯಾಸವಿರಲಿಲ್ಲ; ಸನ್ಯಾಸಧರ್ಮವನ್ನು ಆಚರಣಕ್ಕೆ ತಂದವರು ಜೈನರು ಬೌದ್ಧರು. ಬ್ರಾಹ್ಮಣರು ಅವರಿಂದ ತೆಗೆದು ಕೊಂಡರು."

ಇವರು ಹರಪ್ಪಾ ಮಹೇಂಜದಾರೋ ಕಾಲದಲ್ಲಿ ಸನ್ಯಾಸಗಳಿರಲಿ, ದಿಗಂಬರರು ಇದ್ದರು ಎಂಬುದನ್ನು ಮರೆಯಬಾರದು.

*    *    *    *

ತಂತ್ರಗಳಲ್ಲಿ ಶೈವ, ಶಾಕ್ತೇಯಾದಿ ಸನ್ಯಾಸಗಳ ಉಲ್ಲೇಖವಿದೆ. ಅಲ್ಲಿ ಅವಧೂತನನ್ನು ಸನ್ಯಾಸಿಗಳಲ್ಲಿ ಒಬ್ಬ ಎನ್ನುತ್ತಾರೆ.

---

**ಸೂಚನೆ:** ಈ ವಿಚಾರವನ್ನು ಇನ್ನೂ ವಿಸ್ತಾರವಾಗಿ ನೋಡಬೇಕೆನ್ನುವವರು, ಅವಧೂತ ಗೀತೆ, ಉತ್ತರ ಗೀತೆ, ಪರಿವ್ರಾಜಕೋಪನಿಷತ್ತು, ಮೊದಲಾದ ಗ್ರಂಥಗಳನ್ನು ನೋಡುವುದು.

---